

# ಪರಮಾತ್ಮನ ನಿವಾಸಸ್ಥಾನ

**ಅಷ್ಟಾಚಕ್ರಾ ನವದ್ವಾರಾ ದೇವಾನಾಂ ಪೂರಯೋಧ್ಯಾ। ತಸ್ಯಾಂ ಹಿರಣ್ಯಯಃ ಕೋಶಃ ಸ್ವರ್ಗೋ ಜ್ಯೋತಿಷಾs ವೃತಃ ॥**
(ಅಥರ್ವ :-೧೦-೨-೩೧)

"ಎಂಟು ಚಕ್ರಗಳಿಂದಲೂ, ಒಂಬತ್ತು ದ್ವಾರಗಳಿಂದಲೂ ಕೂಡಿರುವ ಈ ಶರೀರ ದೇವತೆಗಳ-ದಿವ್ಯಶಕ್ತಿಗಳ ನಗರವಾಗಿದೆ. ಇದು 'ಅಯೋಧ್ಯೆ' ಎಂದರೆ ಅಹಿಂಸನೀಯವಾದುದು. ಇದನ್ನು ದುರ್ಗತಿಗೆ ಈಡುಮಾಡ ಬಾರದು. ಏಕೆಂದರೆ–ಈ ನಗರದಲ್ಲಿಯೇ ಹಿತಕಾರಿಯೂ ಶೋಭಾನ್ವಿತನೂ, ಸುಖಪ್ರದನೂ, ಪ್ರಕಾಶಮಯನೂ ಆದ ಪರಮಾತ್ಮನ ನಿವಾಸವಿರುತ್ತದೆ." ದೇವಸ್ಥಾನ, ಪೂಜಾಸ್ಥಳ ಎಂದು ಹೊರಗೆಲ್ಲೂ ಹುಡುಕುವ ಅವಶ್ಯಕತೆಯಿಲ್ಲ. ಅದು ನಮ್ಮೊಳಗೆಯೇ ಇದೆ. **ಇದನ್ನು ಪವಿತ್ರವಾಗಿಟ್ಟುಕೊಳ್ಳಿರಿ.**

# ಪ್ರಕಾಶಕರ ನುಡಿ



"ಮೂರ್ತಿ ಪೂಜಾ ಜಿಜ್ಞಾಸೆ" ಎಂಬ ಈ ಕಿರು ಹೊತ್ತಿಗೆಯು ಪಂಡಿತ ಸುಧಾಕರ ಚತುರ್ವೇದಿಯವರಿಂದ ರಚಿತವಾಗಿ 1946ರಲ್ಲಿ ಮುದ್ರಿಸಲ್ಪಟ್ಟ ಪ್ರತಿಗಳು ಮುಗಿದು ಹೋಗಿ ಬಹಳ ವರ್ಷಗಳಾಗಿದ್ದರೂ ಎರಡನೇ ಮುದ್ರಣವನ್ನು ಕಂಡಿರಲಿಲ್ಲ.

ಸತ್ಯಾಸತ್ಯದ ವಿಮರ್ಶೆ ಹಾಗು ಪರಮಾತ್ಮನ ಸ್ವರೂಪ ಮತ್ತು ಉಪಾಸನಾ ಪದ್ಧತಿಯನ್ನು ಅರಿಯಲು ಈ ಕಿರು ಹೊತ್ತಿಗೆ ದಾರಿದೀಪವಾಗ ಬಲ್ಲದಾದ್ದರಿಂದ ಪುನಮುದ್ರಿಸುವ ನಮ್ಮ ಅಭಿಲಾಷೆಯನ್ನು ಲೇಖಕರಾದ ಪಂ॥ ಸುಧಾಕರ ಚತುರ್ವೇದಿಯವರಲ್ಲಿ ವಿನಂತಿಸಿಕೊಂಡಾಗ ಬಹಳ ಸಂತೋಷದಿಂದ ನಮ್ಮ ಈ ಸತ್ಕಾರ್ಯಕ್ಕೆ ಒಪ್ಪಿಗೆ ನೀಡಿದ್ದಾರೆ. ಅವರಿಗೆ ನಾವು ತುಂಬ ಅಭಾರಿಗಳಾಗಿದ್ದೇವೆ.

ಬ್ರಹ್ಮಚಾರಿಗಳೂ, ವೇದವಿದ್ವಾಂಸರೂ, ತರ್ಕಶಾಸ್ತ್ರದಲ್ಲಿ ಪಂಡಿತರೂ, ವೈದಿಕಧರ್ಮ ಪ್ರಚಾರಕರೂ, ಸ್ವಾತಂತ್ರ್ಯ ಹೋರಾಟಗಾರರೂ ಆದ ಪಂಡಿತ ಸುಧಾಕರ ಚತುರ್ವೇದಿಯವರು ಓದುಗರ ಮನಮುಟ್ಟುವಂತಹ ವಿಶಿಷ್ಟ ಶೈಲಿಯಲ್ಲಿ ಈ ಗ್ರಂಥವನ್ನು ರಚಿಸಿದ್ದಾರೆ. ಮಧ್ಯಕಾಲದಿಂದ ಪ್ರಚಲಿತವಿರುವ ವಿಗ್ರಹಾರಾಧನೆಯಿಂದಾಗುವ ಹಾನಿ ಹಾಗೂ ಪರಮ್ಮಾತನ ವಾಸ್ತವಿಕ ಸ್ವರೂಪ ಮತ್ತು ಉಪಾಸನಾ ಪದ್ಧತಿಯನ್ನು ಓದುಗರು ತಿಳಿದು ಅದರಂತೆ ಆಚರಿಸಿದರೆ ಈ ಕೃತಿಯ ಪುನರ್ಮುದ್ರಣದ ನಮ್ಮ ಉದ್ದೇಶ ಸಾರ್ಥಕವಾಗುತ್ತದೆ.

ಈ ಕೃತಿಯನ್ನು ಮುದ್ರಿಸಲು ತಗಲುವ ಬಹುಪಾಲು ವೆಚ್ಚವನ್ನು ದಾನದ ರೂಪದಿಂದ ಸಂಗ್ರಹಿಸುವ ಜವಾಬ್ದಾರಿಯನ್ನು ಹೊತ್ತಿದ್ದ ಶ್ರೀಯುತ ಎನ್. ಎಲ್. ಸತ್ಯನಾರಾಯಣರವರಿಗೂ, ಈ ಕೃತಿಯ ಮುದ್ರಣಕ್ಕೆ ದಾನ ನೀಡಿದ ಎಲ್ಲ ಮಹನೀಯರಿಗೂ ಮತ್ತು ಈ ಕಿರು ಹೊತ್ತಿಗೆಯನ್ನು ಅಂದವಾಗಿ

ಅದನ್ನು ಧೂಪ-ದೀಪ-ನೈವೇದ್ಯಗಳಿಂದ ಪ್ರತ್ಯಕ್ಷವಾಗಿ ಅಥವಾ ಧ್ಯಾನದ ಮೂಲಕ ಮಾನಸಿಕವಾಗಿ ಅರ್ಚಿಸುವುದನ್ನೇ ನಾವಿಲ್ಲಿ "ಪೂಜೆ" ಯೆಂದು ಕರೆಯುತ್ತೇವೆ. ನಮ್ಮ ವಿವೇಚನಾಸರಣಿಯ ಸೂತ್ರವನ್ನು ಸುಲಭವಾಗಿ ಹಿಂಬಾಲಿಸಬೇಕಾದರೆ ಈ ಪರಿಭಾಷೆ ಪರಮಾವಶ್ಯಕ.

ಇನ್ನು ವಿವೇಚನೆಯನ್ನು ಆರಂಭಿಸೋಣ: ಮೂರ್ತಿ ಪೂಜಕರೂ ಆಸ್ತಿಕರೇ ಆದುದರಿಂದ, ಅವರೆದುರಿಗೆ "ದೇವರಿದ್ದಾನೋ, ಇಲ್ಲವೋ?" ಎಂಬ ಪ್ರಶ್ನೆಯಿಲ್ಲ. "ದೇವರಿದ್ದಾನೆ; ಅವನ ಪ್ರಾಪ್ತಿಗಾಗಿಯೇ ಮೂರ್ತಿಪೂಜೆ ಬೇಕು" ಎಂಬುದವರ ಸಿದ್ಧಾಂತ. "ಪರಮಾತ್ಮನಿಲ್ಲಿ ಸಾಧ್ಯ; ಆ ಸಾಧ್ಯದ ಸಾಧನ ಮೂರ್ತಿಪೂಜೆ" ಎಂಬುದವರ ವಾದ. "ಪರಮಾತ್ಮ ಸಾಧ್ಯ" ನೆಂಬುದರಲ್ಲಿ ಆಸ್ತಿಕರಿಗೆ ಮತಭೇದವಿಲ್ಲ. "ಮೂರ್ತಿಪೂಜೆ ಸಾಧನ"-ಎಂದಾಗಲೇ ಘರ್ಷಣೆಗೆ ಆರಂಭ.

ಸಾಧ್ಯನಾದ ಪರಮಾತ್ಮನ ಸ್ವರೂಪವೇನು? ಅವನು ಸಾಕಾರನೇ? ಅಥವಾ ನಿರಾಕಾರನೇ? ಸಾಕಾರನಾಗಿದ್ದಲ್ಲಿ ಅವನು ನಿತ್ಯನಾಗಿರಲಾರ; ಏಕೆಂದರೆ, ಪರಮಾಣುಸಂಯೋಗದಿಂದಲ್ಲದೆ ಆಕಾರ ಸಿದ್ಧಿಯಾಗಲಾರದು. ಪರಮಾಣು-ಸಂಯೋಗವು, ಬೇರೊಂದು ಚೇತನಸತ್ತೆಯ ಕ್ರಿಯೆಯಿಲ್ಲದೆ ಸ್ವತಃ ಆಗಲಾರದು. ಆದುದರಿಂದ, ಪರಮಾತ್ಮನ ಶರೀರದ ಆಕಾರವನ್ನು ರಚಿಸುವ ಚೇತನಶಕ್ತಿ ಬೇರೊಂದಿರಬೇಕು. ಹಾಗೆ ಬೇರೊಂದು ಚೇತನಶಕ್ತಿಯಿಂದ ಆಕಾರಪಡೆಯುವ ಪರಮಾತ್ಮ, ಜಗತ್ಕರ್ತೃ-ಧರ್ತೃ-ಸಂಹರ್ತೃವಾದ ಪರಮಾತ್ಮನೆಂದಿಗೂ ಆಗಿರಲಾರ, ಅಲ್ಲದೆ, ಸಂಯೋಗದಿಂದ ಉತ್ಪನ್ನವಾದ ಪರಮಾತ್ಮನ ಆಕಾರ, ವಿಯೋಗದಿಂದ ನಷ್ಟವಾಗುವುದರಲ್ಲಿಯೂ ಯಾವ ಸಂದೇಹವೂ ಇಲ್ಲ. ಹೀಗೆ ಸಾಕಾರನಾದ ಪರಮಾತ್ಮ ಸಾದಿ-ಸಾಂತನಾಗಬಲ್ಲನೇ ಹೊರತು, ಅನಾದಿ-ಅನಂತನಾಗಲಾರನು. "ಬೇರೆ ಪರಮಾತ್ಮನ ಆವಶ್ಯಕತೆಯಿಲ್ಲ; ಸ್ವತಃ ಪರಮಾತ್ಮನೇ ತನ್ನ ಶರೀರವನ್ನು ರಚಿಸಿ ಕೊಳ್ಳುತ್ತಾನೆ"-ಎಂಬ ಪಕ್ಷಕ್ಕೆ, ತನ್ನ ಶರೀರವನ್ನು ತಾನು ರಚಿಸಿಕೊಳ್ಳುವಮುನ್ನ, ಪರಮಾತ್ಮನು ನಿರಾಕಾರನಾಗಿಯೇ ಇದ್ದನೆಂದು ಒಪ್ಪಬೇಕಾಗುತ್ತದೆ. ಪರಮಾತ್ಮನು ಮತ್ತೆ ಶರೀರವನ್ನೇಕೆ ರಚಿಸಿಕೊಳ್ಳುತ್ತಾನೆಂಬ ಪ್ರಶ್ನೆ ಬೇರೆ ಏಳುತ್ತದೆ.

ಒಂದುವೇಳೆ, ಪರಮಾತ್ಮನಂತೆಯೇ ಅವನ ಆಕಾರವೂ ಅನಾದಿಯೇ ಎಂದು ತರ್ಕಿಸಿದಲ್ಲಿ, ಅವನ ಆಕಾರಸಿದ್ಧಿಯೇ ಅಸಂಭವವೆಂದು ತೋರುತ್ತದೆ. ಆಕಾರವೆಂದರೇನು? ರಿಕ್ತಸ್ಥಾನದಲ್ಲಿ, ಯಾವುದಾದರೊಂದು ವಸ್ತುವನ್ನಾವರಿಸಿ ಪ್ರತ್ಯೇಕವಾಗಿ ಎದ್ದು ಕಾಣುವ ಒಂದು ಆವರಣ. ಆ ಆವರಣ, ಆವೃತವಸ್ತುವಿಗಿಂತ ದೊಡ್ಡದಾಗಿದ್ದರೆ ಅಥವಾ ಅದರಷ್ಟಾದರೂ ಇದ್ದರೆ, ಅದನ್ನು ಆ ವಸ್ತುವಿನ ಆಕಾರವೆಂದು ಹೇಳಲಿಕ್ಕಾಗುತ್ತದೆ. ಹಾಗಿಲ್ಲದೆ, ಆವೃತವಸ್ತುವೇ ಆವರಣಕ್ಕಿಂತ ದೊಡ್ಡದಾಗಿದ್ದರೆ, ಅದನ್ನು ಆ ವಸ್ತುವಿನ ಆವರಣ ಅಥವಾ ಆಕಾರವೆಂದು ಕರೆಯಲು ಸಾಧ್ಯವಿಲ್ಲ. ಒಂದು ಪಾತ್ರೆಯಲ್ಲಿ ನೀರನ್ನು ತುಂಬಿ, ಅದರಲ್ಲೊಂದು ಸ್ಪಂಜನ್ನು ಮುಳುಗಿಸೋಣ. ಆ ಸ್ಪಂಜಿನಲ್ಲಿ ನೀರು ವ್ಯಾಪಿಸಿದೆ; ಅದರಿಂದ ಹೊರಗೂ ಇದೆ. ಹೀಗಿರುವಾಗ, ಆ ನೀರಿನ ಆಕಾರ ಸ್ಪಂಜಿನ ಆಕಾರವೇ ಎಂದು ಹೇಳಲು ಹೇಗೆ ಸಾಧ್ಯ? ಅದೇರೀತಿ, ಪರಮಾತ್ಮನನ್ನು ಪೂರ್ಣತಃ ಆವರಿಸಬಲ್ಲ, ಪರಮಾತ್ಮನಿಗಿಂತ ದೊಡ್ಡದಾದ ಅಥವಾ ಅವನಷ್ಟಾದರೂ ಇರುವ ಬೇರೊಂದು ವಸ್ತುವಿದ್ದಲ್ಲಿ ಮತ್ತು ಆ ವಸ್ತುವಿನಿಂದಲೂ ರಿಕ್ತವಾದ ಆಕಾಶವಿದ್ದಲ್ಲಿ ಮಾತ್ರ ಪರಮಾತ್ಮನ ಆಕಾರಸಿದ್ಧಿ ಸಾಧ್ಯ. ಪರಮಾತ್ಮನನ್ನು ಆವರಿಸಬಲ್ಲ, ಪರಮಾತ್ಮನಿಗಿಂತ ದೊಡ್ಡದಾದ ಅಥವಾ ಅವನಷ್ಟಾದರೂ ಇರುವ ಬೇರಾವುದಾದರೂ ಒಂದು ತತ್ವದ ಕಲ್ಪನೆ ಆಸ್ತಿಕರಿಗೆ ಮಾನ್ಯವೇನು? ಎರಡನೆಯದಾಗಿ, ಪರಮಾತ್ಮ ಮತ್ತು ಆತನ ಆಕಾರದಿಂದ ರಿಕ್ತವಾದ ಪ್ರದೇಶವಿದೆಯೆಂಬ ಮಾತನ್ನು ಆಸ್ತಿಕರು ಒಪ್ಪಬಲ್ಲರೇನು?

ಸಾಕಾರನಾದ ಪರಮಾತ್ಮ, ಏಕದೇಶಿಯಾಗಿರಬಲ್ಲನೇ ಹೊರತು ಸರ್ವವ್ಯಾಪಿಯಾಗಿರಲಾರ; ಸರ್ವವ್ಯಾಪಿಯಲ್ಲದ ಪರಮಾತ್ಮ ಸರ್ವಜ್ಞನಾಗಿರಲಾರ; ಸರ್ವಜ್ಞನಲ್ಲದ ಪರಮಾತ್ಮ ಸರ್ವನಿಯಂತೃವೂ ಆಗಿರಲಾರ. ಇಂತಹ ಏಕದೇಶಿಯೂ, ಅಲ್ಪಜ್ಞನೂ, ಅಲ್ಪಶಕ್ತಿವಂತನೂ ಆದ ಪರಮಾತ್ಮ, ಒಬ್ಬ ಜೀವಾತ್ಮನಾದಾನೇಹೊರತು ಪರಮಾತ್ಮನೆಂದಿಗೂ ಆಗಿರಲಾರ. ಇನ್ನವನಿಗೆ ಉಪಾಸನೀಯತ್ವವೆಂತು ಸಿದ್ಧಿಸಬಲ್ಲದು?

ಈ ರೀತಿ ವಿವೇಚನೆಮಾಡಿ, ಕೊನೆಗೆ, ನಾವು ಪರಮಾತ್ಮನು ನಿರಾಕಾರನೇ ಹೊರತು ಸಾಕಾರನಲ್ಲವೆಂಬ ನಿಷ್ಕರ್ಷೆಯನ್ನು ಒಪ್ಪಲೇಬೇಕಾಗುತ್ತದೆ.

ಹಾಗಾದರೆ, ಹಿಂದೂಗಳ ಸಾಕಾರೇಶ್ವರ ವಾದ ನಿರಾಧಾರ ವಾದುವೇ ? ಅದಕ್ಕೆ ಧರ್ಮಶಾಸ್ತ್ರಗಳ ಪ್ರಮಾಣವಿಲ್ಲವೇ ? ಎಂಬ ಪ್ರಶ್ನೆ ಸ್ವಾಭಾವಿಕ ವಾಗಿಯೇ ಹುಟ್ಟುತ್ತದೆ. "**ಧರ್ಮಂಜಿಜ್ಞಾಸಮಾನಾನಾಂ ಪ್ರಮಾಣಂ ಪರಮಂಶ್ರುತಿಃ॥ಶ್ರುತಿಸ್ತುವೇದೋವಿಜ್ಞೇಯಃ॥**" ಎಂಬ ಮನುವಾಕ್ಯಾನುಸಾರ, ವೇದಗಳೇ ಧರ್ಮಜಿಜ್ಞಾಸಂಗಳಿಗೆ ಪ್ರಮಾಣವೆಂದೂ, ಹಿಂದೂ ಬಾಂಧವರೆಲ್ಲಾ ಒಪ್ಪಿಯೇ ಒಪ್ಪುತ್ತಾರೆ. ವೇದಗಳಲ್ಲಿ ಸ್ಪಷ್ಟವಾಗಿ ಪರಮಾತ್ಮನು ನಿರಾಕಾರನೆಂದೂ, ಸರ್ವಾಂತರ್ಯಾಮಿಯೆಂದೂ ಘೋಷಿಸಿದೆ. ಗ್ರಂಥ ವಿಸ್ತಾರಭಯದಿಂದ. ಇಲ್ಲಿ ಕೇವಲ ಎರಡೇ ಮಂತ್ರಗಳನ್ನುದಹರಿಸುತ್ತೇವೆ:

**ಸ ಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಂಶುದ್ಧ ಮಪಾಪವಿದ್ಧಮ್ । ಕವಿರ್ಮನೀಷೀ ಪರಿಭೂಃ ಸ್ವಯಂಭೂರ್ಯಾಥಾತಥ್ಯ ತೋಽರ್ಥಾನ್ ವ್ಯದಧಾಚ್ಛಾಶ್ವತೀಭ್ಯಃ ಸಮಾಭ್ಯಃ॥**

[ಯಜುರ್ವೇದ, ಅಧ್ಯಾಯ-೪೦, ಮಂತ್ರ-೮.]

"ಆ ಪರಮಾತ್ಮನು ಅತ್ಯಂತ ವೇಗವಂತನು; ಪರಿಶುದ್ಧನು. ನಿಃಶರೀರನು: ವ್ರಣಹೀನನು. ಸ್ನಾಯುರಹಿತನು; ನಿಷ್ಪಾಪನು. ಪಾತಕವಾತನನ್ನು ವಿದಾರಿಸಲಾರದು. ಅವನು ಸರ್ವಜ್ಞನು: ಚಿತ್ಸ್ವರೂಪನು. ಸರ್ವವ್ಯಾಪಕನು: ಅಜನ್ಮನು. ಅವನು ಶಾಶ್ವತರಾದ ಜೀವಾತ್ಮರುಗಳಿಗಾಗಿ ಯಥಾಸತ್ಯವಾಗಿ ಜ್ಞಾನವನ್ನು ದಯಪಾಲಿಸುತ್ತಾನೆ."

ಈ ಮಂತ್ರದಲ್ಲಿ ಪರಮಾತ್ಮನ ಸ್ವರೂಪವನ್ನು ಅತಿ ಸ್ಪಷ್ಟವಾಗಿ ಚಿತ್ರಿಸಿದೆ. ಅಕಾಯ ಅವ್ರಣ ಮತ್ತು ಅಸ್ನಾವಿರ — ಎಂಬ ಮಾತುಗಳನ್ನು ಗಮನಿಸಬೇಕಾದುದು ಅತಿ ಮುಖ್ಯ. ಏಕೆಂದರೆ, ಈ ಮೂರು ಮಾತುಗಳ ಆಧಾರದಮೇಲೆಯೇ ಮುಂದಿನ ಪದಗಳ ಅರ್ಥಕ್ಕೆ ಕಳೆಕಟ್ಟುತ್ತದೆ. ಈಗ ಮತ್ತೊಂದು ಮಂತ್ರವನ್ನು ನೋಡೋಣ :—

**ಯೋ ವಿದ್ಯಾತ್ ಸೂತ್ರಂ ವಿತತಂ ಯಸ್ಮಿನ್ನೋತಾಃ ಪ್ರಜಾ ಇಮಾಃ। ಸೂತ್ರಂ ಸೂತ್ರಸ್ಯ ಯೋ ವಿದ್ಯಾತ್ಸವಿದ್ಯಾದ್ಬ್ರಾಹ್ಮಣಂ ಮಹತ್॥**

[ಅಥರ್ವ, ಕಾಂ-೧೦, ಸೂ-೮, ಮಂತ್ರ-೩೭.]

"ಯಾವ ದಾರದಿಂದ ಈ ಜೀವಾತ್ಮರುಗಳೆಲ್ಲಾ ಪೋಣಿಸಲ್ಪಟ್ಟಿದ್ದಾರೋ ಆ ವಿಸ್ತಾರವಾದ ಸೂತ್ರವನ್ನೂ, ಆ ಸೂತ್ರದ ಸೂತ್ರವನ್ನೂ ಬಲ್ಲವನು ಮಹತ್ಪರಮಾತ್ಮನನ್ನು ಬಲ್ಲನು."

ಈ ಮಂತ್ರದಲ್ಲಿ ಸ್ಪಷ್ಟವಾಗಿ ಪರಮಾತ್ಮನ ಸರ್ವವ್ಯಾಪಕತ್ವವು ಹೇಳಲ್ಪಟ್ಟಿದೆ. ಸಮಸ್ತ ಜಗತ್ತು ಪರಮಾತ್ಮನಲ್ಲಿಯೇ ಸ್ಥಿರವಾಗಿದೆ. ಈ ಸರ್ವಾಂತರ್ಯಾಮಿಯಾದ ಪ್ರಭುವೇಸಮಸ್ತ ವಿಶ್ವವನ್ನು ಒಟ್ಟಿಗೆ ಧರಿಸುವ, ಒಂದಾಗಿ ಒತ್ತಿ ಹಿಡಿಯುವ ಶಕ್ತಿಸೂತ್ರ; ಈ ಶಕ್ತಿಸೂತ್ರದ ಸೃಜನವೈಖರಿಯನ್ನು ಬಲ್ಲವನೇ ಪರಮಾತ್ಮನನ್ನು ಬಲ್ಲನು.

ಸಾಕಾರವಸ್ತುವು ಸರ್ವಾಂತರ್ಯಾಮಿಯಾಗಲಾರದು. ಸಾಕಾರವಸ್ತುಗಳೆರಡರಲ್ಲಿ, ವ್ಯಾಪ್ಯವ್ಯಾಪಕಸಂಬಂಧ, ಸಮಾನಸ್ಥೂಲತ್ವವಿದ್ದಾಗ ಸಿದ್ಧಿಸಲಾರದು. ಸ್ಥೂಲವಸ್ತುವಿನಲ್ಲಿ ಸೂಕ್ಷ್ಮವಸ್ತು ವ್ಯಾಪಿಸಬಲ್ಲದು. ಈ ವಿಶ್ವದಲ್ಲಿ, ಯಂತ್ರ ಸಹಾಯದಿಂದಲೂ ಸಹ ಅತಿ ಕಷ್ಟದಿಂದ ಗೋಚರಿಸುವಷ್ಟು ಸೂಕ್ಷ್ಮವಸ್ತುಗಳಿವೆ. ಸ್ವತಃ ಜೀವಾತ್ಮನು ಇಂದ್ರಿಯಾಗೋಚರನೆಂಬಷ್ಟು ಸೂಕ್ಷ್ಮನಾಗಿದ್ದಾನೆ. ಇಷ್ಟು ಸೂಕ್ಷ್ಮವಸ್ತುಗಳಲ್ಲಿಯೂ ಅಂತರ್ಯಾಮಿಯಾಗಬೇಕಾದರೆ, ಪರಮಾತ್ಮನು ಸೂಕ್ಷ್ಮತಮ ತತ್ವವೇ ಆಗಿರಬೇಕು. ಇಷ್ಟೊಂದು ಸೂಕ್ಷ್ಮನಾದ ಪರಮಾತ್ಮನ ಆಕಾರಕಲ್ಪನೆ, ಅದೂ ಆ ತತ್ವವು ಸರ್ವಾಂತರ್ಯಾಮಿಯಾಗಿರುವಾಗ, ಹೇಗೆತಾನೇ ಸಿದ್ಧವಾದೀತು?

ಇದೇರೀತಿ, ವೇದಗಳಲ್ಲಿ ಪರಮಾತ್ಮನನ್ನು ಸರ್ವಾಂತರ್ಯಾಮಿಯಾದ ನಿರಾಕಾರತತ್ವವೆಂದು ವರ್ಣಿಸುವ ಸಾವಿರಾರು ಮಂತ್ರಗಳಿವೆ. ವೇದಗಳಲ್ಲಿ ಮೂರ್ತಿಪೂಜಾವಿಧಾನವಿಲ್ಲವೆಂಬ ಮಾತನ್ನು ಬಹುಶಃ ವೇದವೇತ್ತರಾದ ವಿದ್ವಾಂಸರೆಲ್ಲರೂ ಏಕಮತದಿಂದ ಅಂಗೀಕರಿಸುತ್ತಾರೆ. ಮೂರ್ತಿಪೂಜಾಪದ್ಧತಿ, ಅಧಾರ್ಮಿಕವಹುದೋ ಅಲ್ಲವೋ: ಅವೈದಿಕವಂತೂ ಆಗಿಯೇ ಇದೆ-ಎಂಬ ಕಥನ ಬಹುಮಟ್ಟಿಗೆ ಸರ್ವಮಾನ್ಯವೆಂದೇ ಹೇಳಬಹುದು.

ಧರ್ಮದಲ್ಲಿ ಅತೀಂದ್ರಿಯವಿಷಯಗಳಿರುವುವಾದರೂ, ಧರ್ಮದ ಎಲ್ಲಾ ವಿಷಯಗಳೂ ಅತೀಂದ್ರಿಯವಾಗಿಯೇ ಇಲ್ಲ. ಉಪಾಸನೆಯನ್ನು ತರ್ಕಕ್ಕಂದದ ಅತೀಂದ್ರಿಯವಿಷಯವೆಂದು ನಮ್ಮ ಬುದ್ಧಿಯೊಪ್ಪುವುದಿಲ್ಲ. ಉಪಾಸನೆಯ ಗುರಿಯಾದ ಪರಮಾತ್ಮನು ಅತೀಂದ್ರಿಯನಾದರೂ ಸಹ, ಆ ಗುರಿಯನ್ನು ಮುಟ್ಟಲು ನೆರವಾಗುವ ಉಪಾಸನೆ ಅತೀಂದ್ರಿಯವಲ್ಲ. ಉಪಾಸನೆ ಅತೀಂದ್ರಿಯವೆಂಬ ಭಾವನೆ ಜನರಿಗಿದ್ದಲ್ಲಿ, ಇಂದ್ರಿಯಗಳ ಸಹಕಾರದಿಂದಲೇ ಸಿದ್ಧಿಸುವ ಮೂರ್ತಿಪೂಜೆ ಇಂದು ಇಷ್ಟು ವಿಕಟರೂಪದಲ್ಲಿ ನಮ್ಮೆದುರಿಗಿರುತ್ತಿರಲಿಲ್ಲ. ಅಂದಮೇಲೆ, ಇಂದ್ರಿಯಗಮ್ಯವಾದ ಉಪಾಸನಾಕ್ರಿಯೆ, ತರ್ಕಬಾಹಿರವಲ್ಲವೆಂಬುದೂ ಸಿದ್ಧವಾಯಿತು. ಇನ್ನಾ ವಿಷಯದಲ್ಲಿ ತರ್ಕಿಸುವ ಅಧಿಕಾರವೂ ಮಾನವರಿಗಿದ್ದೇ ಇದೆ.

ಇನ್ನು, ಪ್ರಶ್ನೋತ್ತರರೂಪದಲ್ಲಿ, ಮೂರ್ತಿಪೂಜಾ ವಿಮರ್ಶೆಯನ್ನಾರಂಭಿಸುತ್ತೇವೆ. ಅದಕ್ಕೆ ಮೊದಲು, ಒಂದು ಮಾತನ್ನು ಹೇಳುವುದು ಪರಮಾವಶ್ಯಕವೆಂದು ನಾವು ಭಾವಿಸುತ್ತೇವೆ. ಅಭಿಪ್ರಾಯಭೇದವಿದ್ದ ಮಾತ್ರಕ್ಕೆ, ಯಾವ ಮಹಾಪುರುಷನೂ ಮಾನ್ಯನಲ್ಲವೆಂದು ನಾವು ನಂಬಿಲ್ಲ. ಕೇವಲ ವೈಜ್ಞಾನಿಕದೃಷ್ಟಿಯಿಂದ ನಾವೀ ವಿವೇಚನೆಗೆ ಕೈಹಾಕುತ್ತಿದ್ದೇವೆ. ಇಲ್ಲಿ ಸಿದ್ಧಾಂತಗಳ ವಿಮರ್ಶೆಯಾಗುವುದೇಹೊರತು ಯಾವ ವ್ಯಕ್ತಿತ್ವವನ್ನು ಟೀಕಿಸುವುದೂ ನಮ್ಮ ಉದ್ದೇಶ್ಯವಲ್ಲ. ಪಾಠಕರು ಈ ನಿವೇದನವನ್ನು ಗಮನದಲ್ಲಿಟ್ಟುಕೊಳ್ಳಬೇಕೆಂದು ನಮ್ಮ ವಿಜ್ಞಾಪನೆ.

**ಪ್ರಶ್ನೆ** :—ಪರಮಾತ್ಮನ ಸರ್ವವ್ಯಾಪಿಯೆಂಬ ತತ್ವವನ್ನು ಮೂರ್ತಿಪೂಜಾವಿರೋಧಿಗಳಾದ ನೀವೂ ಒಪ್ಪಿಯೇ ಒಪ್ಪುತ್ತೀರಿ. ಹಾಗಿದ್ದಮೇಲೆ, ಮೂರ್ತಿಗಳಲ್ಲಿಯೂ ಪರಮಾತ್ಮನಿರಲೇಬೇಕು. ಎಂದಮೇಲೆ, ಮೂರ್ತಿಪೂಜೆಯು ನಿಷಿದ್ಧವೆಂತಾದೀತು ?

**ಉತ್ತರ**:— ಮೂರ್ತಿಗಳಲ್ಲಿ ಪರಮಾತ್ಮನಿಲ್ಲವೆಂದು ನಾವೆಲ್ಲಿ ಹೇಳುತ್ತೇವೆ? ಭಗವಂತನು ಸರ್ವವ್ಯಾಪಕನಾದುದರಿಂದ ಮೂರ್ತಿಗಳಲ್ಲಿಯೂ ಇದ್ದೇ ಇದ್ದಾನೆ.

ಪ್ರಶ್ನೆ :— ಈ ತತ್ವವನ್ನು ನೀವು ಒಪ್ಪಿದಮೇಲೆ, ಇನ್ನು ಮೂರ್ತಿಪೂಜೆಯನ್ನೇಕೆ ಖಂಡಿಸುತ್ತೀರಿ ? ಈಗ ನೀವು ನಿಮ್ಮ ದೇಹಕ್ಕೆ ಕೊಟ್ಟ ಸತ್ಕಾರವನ್ನೇ ನಿಮಗೆ ಕೊಟ್ಟ ಸತ್ಕಾರವೆಂದು ಭಾವಿಸುವುದಿಲ್ಲವೇ ? ನಿಮ್ಮ ದೇಹವನ್ನು ತಾಡಿಸಿದರೆ, ನಿಮ್ಮನ್ನೇ ತಾಡಿಸಿದಂತಾಗುವುದಿಲ್ಲವೇ ?

ಉತ್ತರ :— ಈ ನಿಮ್ಮ ಪ್ರಶ್ನೆ ದೇವರನ್ನೂ ಒಬ್ಬ ಸಾಮಾನ್ಯ ಜೀವನ ಮಟ್ಟದಲ್ಲಿಡುತ್ತದೆ. ಜೀವಾತ್ಮನಂತೆಯೇ ಪರಮಾತ್ಮನೂ ಭೋಕ್ತೃ— ಅಂದರೆ, ಸುಖ–ದುಃಖಗಳನ್ನು ಅನುಭವಿಸುವವನೆಂದು ನೀವು ಭಾವಿಸುತ್ತೀರೇನು ? ನಮಗೊಂದು ಶರೀರವಿದೆ ; ಆ ಶರೀರದಲ್ಲಿ ನಾವಿದ್ದೇವೆ. ಆ ಶರೀರವೇ ನಮ್ಮ ಕಷ್ಟ-ಸುಖಗಳ ಅನುಭವ ಸಾಧನವಾಗಿರುವುದರಿಂದ, ಅದರ ಮೂಲಕವೇ ನಾವು ಕಷ್ಟ–ಸುಖಗಳನ್ನನುಭವಿಸಬೇಕಾಗಿರುವುದರಿಂದ—ನಾವು ಶರೀರಕ್ಕೆ ಮಾನ ಸಿಕ್ಕಿದರೆ ನಾವು ಮಾನಹೊಂದಿದೆವೆಂದು ಭಾವಿಸುತ್ತೇವೆ; ಶರೀರಕ್ಕೆ ಅಪಮಾನವಾದರೆ—ನಾವು ಅಪಮಾನಿತರಾದೆವೆಂದು ಭಾವಿಸುತ್ತೇವೆ. ಆ ಭಾವನೆಯ ಮೂಲ ನಮ್ಮ ಭೋಕ್ತೃತ್ವ. ಈಗ ಸ್ವಲ್ಪ ಯೋಚಿಸಿರಿ : ನಮಗೆ 'ನಮ್ಮದೆ'ಂದು ಹೇಳಿಕೊಳ್ಳಲು ಈ ದೇಹವಿರುವಂತೆ, ಅಶರೀರನಾದ ಪರಮಾತ್ಮನಿಗೆ ಯಾವುದಾದರೂ ಒಂದು ಶರೀರವಿದೆಯೇ ? ಸರ್ವವ್ಯಾಪಕನಾದ ಪರಮಾತ್ಮನಿಗೆ ಒಂದು ಮೂರ್ತಿಯಷ್ಟಗಲದ ಶರೀರ ಸಾಕೇ ? ಆ ಶರೀರದಲ್ಲಿ ಕುಳಿತು, ಅವನು ಸನ್ಮಾನಿತ ಅಥವಾ ಅಪಮಾನಿತನಾಗುತ್ತಾನೆನ್ನಲು ಸಾಧ್ಯವೇ ? ಆ ಮೂರ್ತಿಯೇ ಪರಮಾತ್ಮನ ಶರೀರವಾಗಿದ್ದಲ್ಲಿ, ನಮ್ಮ ಶರೀರದಲ್ಲಿ ಜೀವಾತ್ಮ-ಸಂಯೋಗದಿಂದ ಚೇತನಶಕ್ತಿ ಪ್ರವಹಿಸುತ್ತಿರುವಂತೆ, ಪರಮಾತ್ಮನ ಸಂಯೋಗದಿಂದ ಆ ಮೂರ್ತಿಯಲ್ಲಿ ಚೇತನಶಕ್ತಿ ಪ್ರವಾಹ ಗೋಚರಿಸಬೇಕಾಗಿತ್ತು ; ಆದರೆ ಜಡವಿಗ್ರಹವು ಜಡವಿಗ್ರಹವಾಗಿಯೇ ಉಳಿಯುವುದೇಕೆ ?

ಒಂದು ವೇಳೆ ಪರಮಾತ್ಮನು ಸರ್ವವ್ಯಾಪಕನಾಗಿರುವುದರಿಂದ ಜಡವಾದ ಮೂರ್ತಿಯಲ್ಲಿಯೂಕೂಡ ಚೇತನನ ಗುಣ, ಕರ್ಮ, ಸ್ವಭಾವಗಳು ವ್ಯಕ್ತವಾಗಬೇಕಾಗಿದ್ದಿತು, ಆದರೆ ಹಾಗೆ ಕಾಣುವುದಿಲ್ಲ ಎಂದು ಹೇಳುವ ಪಕ್ಷದಲ್ಲಿ ಆಮೂರ್ತಿ ಭಗವಂತನ ಶರೀರವಲ್ಲ. ಆದಕಾರಣ ಅವನಿಗೆ ಅದರ

ಮೂಲಕ ಭೋಕ್ತೃತ್ವ ಉಂಟಾಗುವುದಿಲ್ಲ ಎಂಬ ಸೂಕ್ಷ್ಮತತ್ವವನ್ನು ಮರೆಯಲು ಎಂತು ಸಾಧ್ಯ ?

ಸಕಲ ಚರಾಚರ ಜಗತ್ತಿನಲ್ಲಿ ಕಾರ್ಯ ಅಹರ್ನಿಶಿ ನಡೆಯುತ್ತಿದ್ದರೂ ಕೂಡ ಸೂಕ್ಷ್ಮತ್ವದಕಾರಣದಿಂದ ಆ ಸೂಕ್ಷ್ಮಕರ್ಮಗಳು ಸಾಧಾರಣರಿಗೆ ಗೋಚರವಾಗುವುದಿಲ್ಲ.

ನಾವು ನಮ್ಮ ಶರೀರದಲ್ಲಿಮಾತ್ರ ಇದ್ದೇವೆ; ನಮ್ಮನ್ನು ಗೌರವಿಸಲು ಹಾಕುವ ಪುಷ್ಪಮಾಲೆಯಲ್ಲಾಗಲೀ, ಶಿಕ್ಷಿಸಲು ಉಪಯೋಗಿಸುವ ದಂಡದಲ್ಲಾಗಲೀ ನಾವಿಲ್ಲ. ಆದುದರಿಂದಲೇ ನಾವು ಹೂಮಾಲೆ ನಮ್ಮ ಶರೀರದ ಮೇಲೆ ಬಿದ್ದಾಗ ಮಾನ ಸಿಕ್ಕಿತೆಂದುಕೊಳ್ಳುತ್ತೇವೆ. ದಂಡ ಬಿದ್ದಾಗ ಅವಮಾನವಾಯಿತೆಂದುಕೊಳ್ಳುತ್ತೇವೆ. ಹಾಗಲ್ಲದೆ, ಆ ಪುಷ್ಪಮಾಲೆಯಲ್ಲಿಯೂ, ದಂಡದಲ್ಲಿಯೂ ನಾವು ಇದ್ದಿದ್ದರೆ-ಅವೂ ನಮ್ಮ ದೇಹದ ಅಂಗಗಳೇ ಆಗುತ್ತಿದ್ದುವು. ಆ ಸ್ಥಿತಿಯಲ್ಲಿ ಅವು ಮಾನ ಅಥವಾ ಅಪಮಾನದ ಸಾಧನಗಳಾಗುತ್ತಿರಲಿಲ್ಲ. ಈಗ ಬೇರೆಯವರು ಬಂದು ತಮ್ಮ ಕೈಗಳಿಂದ ನಮ್ಮ ಪಾದ ಸ್ಪರ್ಶ ಮಾಡಿದರೆ, ನಮಗೆ ಗೌರವ ಸಿಕ್ಕಿತೆಂದುಕೊಳ್ಳುತ್ತೇವೆ; ಬೇರೆಯವರು ತಮ್ಮ ಪಾದದಿಂದ ನಮ್ಮ ಶರೀರವನ್ನು ತಗಲಿಸಿದರೆ, ಅಗೌರವವಾಯಿತೆಂದು ಭಾವಿಸುತ್ತೇವೆ. ಹಾಗಲ್ಲದೆ, ನಮ್ಮ ಪಾದವನ್ನು ನಾವೇ ಸ್ಪರ್ಶಮಾಡಿ "ಮಾನ" ಸಿಕ್ಕಿತೆಂದೂ, ನಮ್ಮ ಕಾಲಿನಿಂದ ನಾವೇ ನಮ್ಮನ್ನೊದೆದುಕೊಂಡು ಅವಮಾನವಾಯಿತೆಂದೂ ಭಾವಿಸಲಾದೀತೇ ? ಇದರಿಂದ ವ್ಯಕ್ತವಾಗುವುದೇನು? ನಮ್ಮ ವ್ಯಾಪ್ತಿಯಿಲ್ಲದ ವಸ್ತುಗಳಿಂದ ನಮಗೆ ಮಾನಾಪಮಾನಪ್ರಾಪ್ತಿ ಸಾಧ್ಯವೇ ಹೊರತು ಅನ್ಯಥಾ ಸಾಧ್ಯವಿಲ್ಲವೆಂದು ತಾನೇ ತಿಳಿಯುತ್ತದೆ. ಅದೇರೀತಿ, ಪರಮಾತ್ಮನಿಲ್ಲದ ವಸ್ತುಗಳಿಂದತಾನೇ ಅವನ ಶರೀರವೆಂದು ನೀವು ಭಾವಿಸುವ ವಿಗ್ರಹಕ್ಕೆ ಮಾನಾಪಮಾನ ಸಾಧ್ಯ ? ಈಗ ಹೇಳಿ, ಹೂವಿನಲ್ಲಿ, ಹಣ್ಣಿನಲ್ಲಿ, ಹತ್ತಿಯಲ್ಲಿ, ಬತ್ತಿಯಲ್ಲಿ, ಕಡ್ಡಿಯಲ್ಲಿ, ಕಾಯಿಯಲ್ಲಿ ಆ ಸರ್ವಾಂತರ್ಯಾಮಿಯಾದ ಜಗದೀಶ್ವರನು ವ್ಯಾಪಕನಾಗಿಲ್ಲವೇ ? ಮತ್ತವುಗಳ ಸಮರ್ಪಣದಿಂದ ಪರಮಾತ್ಮನು ಪೂಜಿತನಾದನೆಂದು ಭಾವಿಸಲು ಹೇಗಾದೀತು ? ಮೂರ್ತಿಪೂಜನದಿಂದ ಮೂರ್ತಿಸ್ಥನಾದ ಪರಮಾತ್ಮನು ಪೂಜಿತನಾದನೆಂದು ಭಾವಿಸು

ವುದಾದಲ್ಲಿ, ತೆಂಗಿನಕಾಯನ್ನು ಒಡೆಯುವುದರಿಂದ ಅದರಲ್ಲಿರುವ ಪರಮಾತ್ಮನು ನೊಂದನೆಂದೂ ಸಹ ಒಪ್ಪಬೇಕಾಗುತ್ತದೆ. ಕರ್ಪೂರದಲ್ಲಿರುವ ಪರಮಾತ್ಮನು, ಅದನ್ನು ಸುಡುವಾಗ ಬೆಂದುಹೋದನೆಂದೂ ಸಹ ಭಾವಿಸಬೇಕಾಗುತ್ತದೆ. ನಾವು ನೆಲದ ಮೇಲೆ ನಡೆಯುವಾಗ, ನೆಲದಲ್ಲಿರುವ ಪರಮಾತ್ಮನು ತುಳಿಯಲ್ಪಟ್ಟನೆಂದೂ ಸಹ ಭಾವಿಸಬೇಕಾಗುತ್ತದೆ.

ಎರಡನೆಯದಾಗಿ, ನೀವು ಮೂರ್ತಿಸ್ಥನಾದ ಪರಮಾತ್ಮನು ಭೋಕ್ತೃ ಎಂಬುದನ್ನು ಸಿದ್ಧಪಡಿಸುವವರೆಗೆ, ಮೂರ್ತಿಪೂಜೆಯು ಎಂದಿಗೂ ಸಿದ್ಧವಾಗಲಾರದು.

**ಪ್ರಶ್ನೆ** :—ನೀವು ಹೇಳುವಂತೆ, ಪರಮಾತ್ಮನು ಹೂವು ಹಣ್ಣು ಮೊದಲಾದ ಸರ್ವವಸ್ತುಗಳಲ್ಲಿಯೂ ವ್ಯಾಪಕನಾಗಿದ್ದಾನೆಂಬುದು ಸತ್ಯ. ಧಾತುಮಯವಾದ ಮೂರ್ತಿ, ಜಡಮೂರ್ತಿಯೇ ಎಂಬುದೂ ಸಹ ಸತ್ಯವೇ. ಆದರೆ, ಪ್ರಾಣಪ್ರತಿಷ್ಠೆ, ಆವಾಹನೆ ಮೊದಲಾದ ಆಗಮೋಕ್ತ ಕ್ರಿಯೆಗಳಿಂದ ಆ ಮೂರ್ತಿಗೆ ದೇವತ್ವ ಲಭಿಸುತ್ತದೆ. ಆದುದರಿಂದಲೇ ನಾವು ದೇವಾಲಯಗಳಲ್ಲಿ ಶಾಸ್ತ್ರೋಕ್ತವಾಗಿ ಪ್ರತಿಷ್ಠಿತವಾದ ವಿಗ್ರಹಗಳನ್ನು ಮಾತ್ರ ಅರ್ಚಿಸುತ್ತೇವೆ.

**ಉತ್ತರ** :—ಪ್ರಾಣಪ್ರತಿಷ್ಠೆಯಾದಮೇಲೂ ದೇವಾಲಯದ ಮೂರ್ತಿಗಳು ಮೊದಲಿನಂತೆಯೇ ನಿಶ್ಚೇತನವಾಗಿರುವುದನ್ನು ನೋಡುತ್ತೇವೆಯೇ ಹೊರತು, ಆ ವಿಗ್ರಹಗಳು ಉಸಿರಾಡುವುದು, ಮಾತನಾಡುವುದು, ನಗುವುದು ಅಳುವುದು, ತಿನ್ನುವುದು, ಕುಡಿಯುವುದು ಮೊದಲಾದ ಕಾರ್ಯ ಮಾಡುವುದನ್ನು ನಾವಾರೂ ನೋಡುವುದಿಲ್ಲ. ಮತ್ತವಕ್ಕೆ ಪ್ರಾಣಪ್ರತಿಷ್ಠೆಯಾಯಿತೆಂದು ಭಾವಿಸಲು ನಿಮ್ಮ ಬಳಿ ಇರುವ ಪ್ರಮಾಣವೇನು ?

ಎರಡನೆಯದಾಗಿ—ನೀವು ಪ್ರಾಣಪ್ರತಿಷ್ಠೆ ಮಾಡುವ ಅಭಿಪ್ರಾಯವೇನು? ಮೊದಲು ಆ ಮೂರ್ತಿಯಲ್ಲಿ ಪರಮಾತ್ಮನಿರಲಿಲ್ಲವೇ? ಅಥವಾ, ಇದ್ದರೂ ಪ್ರಾಣಹೀನನಾಗಿದ್ದನೇ? ಈ ಬ್ರಹ್ಮಾಂಡದ ಸಂಚಾಲಕನಾದ

ಪ್ರಘುವಿಗೆ ಪ್ರಾಣಪ್ರದಾನ ಮಾಡುವ ಶಕ್ತಿ, ಅಲ್ಪಶಕ್ತನಾದ ಜೀವಾತ್ಮನಿಗಿರುವುದೇ? ಜೀವಾತ್ಮನಿಂದಲೇ ಪ್ರಾಣದಾನ ಮಾಡಲ್ಪಟ್ಟ ಪರಮಾತ್ಮ, ಜೀವಾತ್ಮನಿಗಿಂತ ದೊಡ್ಡವನು ಹೇಗಾದಾನು? ಸರ್ವವ್ಯಾಪಿಯೂ, ಅಖಂಡನೂ, ಏಕರಸನೂ ಆದ ಪರಮಾತ್ಮನು ಆವಾಹನೆ ಮಾಡಿದಾಗ ಬರಬೇಕೆಲ್ಲಿಂದ? ವಿಸರ್ಜನೆ ಮಾಡಿದಾಗ ಹೋಗಬೇಕೆಲ್ಲಿಗೆ?

**ಪ್ರಶ್ನೆ** :—ಹಾಗಲ್ಲ; ಅದು ಸರಿಯಾದ ತರ್ಕವಲ್ಲ. ಅಲ್ಲಿ ಮುಖ್ಯವಾದುದು ಭಾವನೆ. ಭಕ್ತನು, ಭಕ್ತಿಭಾವದಿಂದ "ಭಗವಂತ! ಇಲ್ಲಿ ದರ್ಶನಕೊಡು." ಎಂದು ಕರೆದಾಗ, ಪರಮಾತ್ಮನಿಗೆ ಆ ಕೂಗು ಕೇಳಿಸುವುದಿಲ್ಲವೇ? ಸರ್ವಜ್ಞನಾದ ಪರಮಾತ್ಮನು, "ಭಕ್ತನು ಪೂಜಿಸುತ್ತಿರುವುದು ವಿಗ್ರಹವನ್ನಲ್ಲ; ಅದರಲ್ಲಡಗಿರುವ ತನ್ನನ್ನು" ಎಂಬುದನ್ನೂ ಸಹ ತಿಳಿಯಲಾರನೇ? ಭಕ್ತರ ಭಾವನೆ, ಭಗವಂತನಿಗೆ ತಿಳಿದೇ ತಿಳಿಯುತ್ತದೆ. ಮತ್ತವನು ಪ್ರಸನ್ನನಾಗನೇತಕ್ಕೆ?

**ಉತ್ತರ** :—ಬಹಳ ದುರ್ಬಲವಾದ ಪಕ್ಷವಿದು. ಸರ್ವಜ್ಞನಾದ ಪರಮಾತ್ಮನಿಗೆ, ಭಕ್ತರ ಭಾವನೆ ತಿಳಿಯುವುದೆಂದ ಮೇಲೆ, ಅಂತಃಸಾಕ್ಷಿಯಾದ ಆ ಪರಮಾತ್ಮನು, ಉಪಾಸನೆ ಮಾಡಬೇಕೆಂಬ ನಿಮ್ಮ ಭಾವನಾಮಯವಾದ ಭಕ್ತಿಯನ್ನು ತಿಳಿದುಕೊಂಡೇ ಬಿಡುತ್ತಾನೆ. ಹಾಗಿದ್ದಮೇಲೆ, ಇನ್ನು ಬಾಹ್ಯಪೂಜೆಯ ಅವಶ್ಯಕತೆ ಏನುಳಿಯುತ್ತದೆ? ಅಂತರಂಗದ ಭಕ್ತಿಭಾವನೆಯನ್ನಂಗೀಕರಿಸಿದಮೇಲೆ, ಹೊರಗಿನಿಂದ, ಬೊಂಬೆಗಳಮೇಲೆ, ಹೂವು, ಎಲೆ, ಹಣ್ಣು, ನೀರುಗಳನ್ನೇರಿಸಿ, "ಭಗವಂತ! ನೀನೇ ಗತಿ" ಎಂದು ವಿಗ್ರಹದ ಮುಂದೆ ಅಡ್ಡಬೀಳುವುದರ ಆವಶ್ಯಕತೆ ಏನಿದೆ?

**ಪ್ರಶ್ನೆ** :—ನಿಮಗೆ ಭಾವನಾಬಲದ ಪರಿಚಯವಿರಲಾರದು ಆದುದರಿಂದ ಅನ್ಯಥಾ ಭಾವಿಸುತ್ತೀರಿ. ಭಾವನೆಯಿದ್ದಂತೆ ಸಿದ್ಧಿಯಾಗುತ್ತದೆ.

**ಉತ್ತರ** :—ಜಡವನ್ನು ಜಡ, ಚೇತನವನ್ನು ಚೇತನವೆಂದು ಭಾವಿಸುವುದು ಅನ್ಯಥಾ ಭಾವನೆಯಾಗಿದ್ದಲ್ಲಿ, ನಾವು ಅನ್ಯಥಾಭಾವಿಸುವವರೇ ಸರಿ.

ಆದರೆ, ಜಡವಿಗ್ರಹವನ್ನು ಚೇತನ ಪರಮಾತ್ಮನೆಂಬ ಭಾವನೆ, ಯಥಾವದ್ಭಾವನೆಯೆಂಬ ಕಥನಕ್ಕೆ ಪ್ರಮಾಣಬೇಕಾಗಿದೆ. ಭಾವನೆಯಿದ್ದಂತೆ ಸಿದ್ಧಿಯಾಗುವಲ್ಲಿ, ಈ ಜಗತ್ತಿನಲ್ಲಿಷ್ಟು ದುಃಖವೇಕಿರುತ್ತಿತ್ತು? ಅತ್ಯಂತ ಮೂರ್ಖನಿಂದ ಹಿಡಿದು, ಅತ್ಯಂತ ಪ್ರಚಂಡನಾದ ವಿದ್ವಾಂಸನವರೆಗೆ, ಅರಸನಿಂದ ಹಿಡಿದು ತಿರುಕನವರೆಗೆ, ಎಲ್ಲರೂ "ಸುಖ ಬೇಕು" ಎಂದೇ ಜಪಿಸುತ್ತಾರೆ. ಯಾರೂ ದುಃಖದ ಭಾವನೆಯನ್ನು ಮಾಡಿಕೊಳ್ಳುವುದಿಲ್ಲ. ಹಾಗಿದ್ದರೂ ಮಾನವರ ಮೇಲೆ, ದಿನದಿನ, ಬಾರಿಬಾರಿ, ಮೇಲೆ ಮೇಲೆ ದುಃಖದ ಪ್ರಹಾರವೇತಕ್ಕಾಗುತ್ತಿರುತ್ತದೆ? "ನಾನು ಸುಖಿಯಾಗಬೇಕು" ಎಂಬ ಭಾವನೆ ಯಾವನಿಗೆ ತಾನೇ ಇರುವುದಿಲ್ಲ? ಭಾವನಾಬಲದಿಂದ ಉಪ್ಪನ್ನು ಸಕ್ಕರೆಯಾಗಿ, ಕಟ್ಟಿಗೆಯನ್ನು ಕಬ್ಬಾಗಿ ಮಾಡಲಾದೀತೇ? ಮರುಭೂಮಿಯ ಶ್ರಾಂತಪಥಿಕ, ದೂರದ ಬಿಸಿಲ್ಗುದುರೆಯನ್ನು ನೀರೆಂದೇ ಹೃತ್ಪೂರ್ವಕವಾಗಿ ಭಾವಿಸುತ್ತಾನೆ. ಆ ಭಾವನಾಬಲದಿಂದ ಆ ಮೃಗಮರೀಚಿಕೆ ನೀರಾಗಿ, ಆ ಶ್ರಾಂತಪಥಿಕನ ದಾಹವನ್ನೇಕೆ ಆರಿಸುವುದಿಲ್ಲ? ಜನ್ಮತಃ ಮೂಕನಾದವನನ್ನು ಪ್ರಸಿದ್ಧವಾಗ್ಮಿಯೆಂದು ಭಾವಿಸಿ, ಅವನ ಉಜ್ವಲ ಭಾಷಣವನ್ನು ನೀವು ಕೇಳಬಲ್ಲಿರಾ? ಕ್ಷಯರೋಗದಿಂದ ಕ್ಷೀಣನಾದವನನ್ನು ದಿಗ್ಗಜಮಲ್ಲನೆಂದು ಭಾವಿಸಿ, ಶಕ್ತಿಶಾಲಿಯಾದ ಜಟ್ಟಿಯಮೇಲೆ ಕುಸ್ತಿಗೆ ಬಿಟ್ಟು, ಗೆಲ್ಲಿಸಲಾದೀತೇ? ಹುಟ್ಟುಕುರುಡನನ್ನು ತೀಕ್ಷ್ಣಚಕ್ಷುವೆಂದು ನೀವು ಭಾವಿಸಿದ ಮಾತ್ರಕ್ಕೆ ಆ ಹತಭಾಗ್ಯನು ಜ್ಯೋತಿಯ ಒಂದು ರೇಖೆಯನ್ನಾದರೂ ನೋಡಬಲ್ಲನೇ? ಇಲ್ಲನುದನ್ನು ಇದೆಯೆಂದು ತಿಳಿದುಕೊಳ್ಳುವುದು ಭಾವನೆಯಲ್ಲ. ಇದ್ದುದನ್ನಿದ್ದಂತೆ ತಿಳಿಯುವುದೇ ಭಾವನೆ.

ಪ್ರಶ್ನೆ :—ಹೋಗಲಿ. ಈ ಯುಕ್ತಿಬೇಡ. ಪರಮಾತ್ಮನು ನಿರಾಕಾರನೇ ಆದರೂ ಸಹ, ಅವನು ಸರ್ವಶಕ್ತನೆಂಬುದನ್ನಂತೂ ನಾವು ಮರೆಯುವಂತಿಲ್ಲವಲ್ಲ. ಈ ಜಗತ್ತಿನಲ್ಲಿ ಅಧರ್ಮ ಹೆಚ್ಚಿದಾಗ, ಅದನ್ನು ನಾಶಮಾಡಿ, ಧರ್ಮಸಂಸ್ಥಾಪನೆ ಮಾಡುವುದಕ್ಕಾಗಿ ದೇಹಧಾರಿಯಾಗಿ ಬರುತ್ತಾನೆ. ಇಂತಹ ದೇಹಧಾರೀಪರಮಾತ್ಮನನ್ನೇ ಅವತಾರವೆನ್ನುತ್ತಾರೆ. ರಾಮ, ಕೃಷ್ಣ ಮೊದ

ಲಾದವರೆಲ್ಲಾ ಅವತಾರಗಳೇ. ಅವರಿಗೆ ರೂಪಗಳೂ ಇದ್ದುವು. ನಿಮ್ಮ ಪರಿಚಯವಾದವರೊಬ್ಬ ಮಿತ್ರನ ಚಿತ್ರವನ್ನು ನೋಡಿ ನೀವವನನ್ನು ಸ್ಮರಿಸುವುದಿಲ್ಲವೇ? ಅದೇರೀತಿ, ದೇವರ ಅವತಾರಗಳಾದ ರಾಮ, ಕೃಷ್ಣ, ನರಸಿಂಹ ಮೊದಲಾದವರ ಮೂರ್ತಿಗಳನ್ನು ನೋಡಿ, ಅವರಲ್ಲಿ ಭಕ್ತಿ ಹುಟ್ಟುತ್ತದೆ.

**ಉತ್ತರ:**—ಅವತಾರವೆಂಬ ಮಾತಿನ ಅರ್ಥವನ್ನಾದರೂ ಯೋಚಿಸಿರಿ. ಅವತಾರವೆಂದರೆ, ಕೆಳಗಿಳಿಯುವುದೆಂದರ್ಥ. ಕೆಳಗಿಳಿಯುವುದು ಯಾರಿಗೆ ಸಾಧ್ಯ? ಮೇಲೆ ಮಾತ್ರ ಇರುವವನಿಗೆ. ನಾವೀಗ ಮಂಚದಮೇಲಿದ್ದೇವೆ; ನಾವು ನೆಲದಮೇಲಿಳಿಯಬಲ್ಲೆವು. ಹಾಗಿಲ್ಲದೆ—ನಾವು ಮೊದಲೇ ನೆಲದ ಮೇಲೂ ಇದ್ದೆವೆಂದಿಟ್ಟುಕೊಂಡರೆ—"ನಾವು ಇಳಿಯುತ್ತೇವೆ" ಎಂಬ ಮಾತಿಗೆ ಅರ್ಥವೇನು? ಶ್ರೀರಾಮನಾಗಿ, ಅಥವಾ ಶ್ರೀಕೃಷ್ಣನಾಗಿ ನಾರಾಯಣನು ಇಳಿಯುವುದಕ್ಕಿಂತ ಮೊದಲು, ಈ ಭೂಲೋಕದಲ್ಲಿ, ಕೌಸಲ್ಯಾದೇವಿಯ ಗರ್ಭದಲ್ಲಿ ಅಥವಾ ದೇವಕೀದೇವಿಯ ಕುಕ್ಷಿಯಲ್ಲಿ ಮಹಾವಿಷ್ಣುವು ವ್ಯಾಪಿಸಿರಲಿಲ್ಲವೇನು? ಸರ್ವಕಾಲದಲ್ಲಿಯೂ, ಸರ್ವತ್ರ ವ್ಯಾಪಿಸಿರುವ ಪರಮಾತ್ಮನು, ಇಳಿಯುವುದೆಲ್ಲಿಂದ? ಶ್ರೀರಾಮನ ಅಥವಾ ಶ್ರೀಕೃಷ್ಣನ ಶರೀರದ ಒಳಗೂ, ಹೊರಗೂ ವ್ಯಾಪಿಸಿದ್ದಂತೆಯೇ, ಪರಮಾತ್ಮನು ಪ್ರತಿಯೊಂದು ಜಡ ಚೇತನವಸ್ತುವಿನ ಅಣು ಅಣುವಿನಲ್ಲಿಯೂ ವ್ಯಾಪಿಸಿರಲಿಲ್ಲವೇನು? ಇಂದು ವ್ಯಾಪಿಸಿಲ್ಲವೇನು? ಏಕದೇಶಿಯಾದ ಜೀವಾತ್ಮನ ಉತ್ತಾರ, ಅವತಾರ, ಗಮನ, ಆಗಮನಗಳು ಸಂಭವವೇ ಹೊರತು, ಸರ್ವವ್ಯಾಪಿಯಾದ ಪರಮಾತ್ಮನ ವಿಷಯದಲ್ಲಿ ಆ ಮಾತುಗಳನ್ನಾಡಲು ಸಾಧ್ಯವಿಲ್ಲ. ಸರ್ವಶಕ್ತನೆಂಬ ಶಬ್ದಕ್ಕೆ ಎಲ್ಲವನ್ನೂ ಮಾಡಬಲ್ಲವನು ಎಂಬ ಅರ್ಥವಲ್ಲ. ಅಂತಹ ಅರ್ಥಮಾಡಿದಲ್ಲಿ, ದೇವರು ಅನ್ಯಾಯ ಮಾಡಬಲ್ಲನೇ? ದೇವರು ಸ್ವತಃ ಸತ್ತುಹೋಗಬಲ್ಲನೇ? ಎಂಬ ಪ್ರಶ್ನೆಗಳು ಏಳುತ್ತವೆ. ದೇವರು ಅನ್ಯಾಯ ಮಾಡಲಾರ; ದೇವರು ಸಾಯಲಾರ—ಎಂದು ಹೇಳಿದ ಮಾತ್ರಕ್ಕೆ—ಅವನು ಅಲ್ಪಶಕ್ತನೆಂದು ಹೇಳಿದಂತಾಗಲಿಲ್ಲ ಅಸಂಭವವಾದುದೆಂದಿಗೂ ಸಂಭವವಾಗಲಾರದು. ಅಶರೀರನಾಗಿ, ಸರ್ವವ್ಯಾಪಿಯಾಗಿ,

ಅಖಂಡನಾಗಿ, ಏಕರಸನಾಗಿ, ಆನಂದ ಸ್ವರೂಪನಾಗಿ ಇರುವುದು ಪರಮಾತ್ಮನ ಸ್ವಭಾವ. ಆ ಸ್ವಭಾವಕ್ಕೆ ವಿರುದ್ಧವಾಗಿ, ಅವನು ಕೆಳಗಿಳಿಯಲಿಲ್ಲವೆಂದು ತರ್ಕಿಸಿ, ಅವನು ಅಲ್ಪಶಕ್ತನೇ ಹೊರತು ಸರ್ವಶಕ್ತನಲ್ಲವೆಂದು ನಿರ್ಧರಿಸಲಾಗುವುದಿಲ್ಲ.

ಎರಡನೆಯದಾಗಿ, ಆಕಾರಸಿದ್ಧಿಗೆ, ರಿಕ್ತಸ್ಥಾನದ ಆವಶ್ಯಕತೆಯುಂಟೆಂಬುದನ್ನು ಮರೆಯುವಂತಿಲ್ಲ, ಮಣ್ಣಿನರಾಶಿಯಿಂದ, ಮಣ್ಣಿನರಾಶಿಯಿಲ್ಲದ ರಿಕ್ತಸ್ಥಾನದಲ್ಲಿ, ತನಗೆ ಬೇಕಾದಷ್ಟು ಮಣ್ಣನ್ನು ತೆಗೆದುಕೊಂಡು ಕುಂಬಾರನು ಮಡಿಕೆಯ ಆಕೃತಿಯನ್ನು ರಚಿಸಬಲ್ಲನೇ ಹೊರತು, ಆ ಮೃದ್ರಾಶಿಯಲ್ಲಿಯೇ ಘಟಾಕೃತಿಯನ್ನು ನಿರ್ಮಿಸಲಾಗುವುದಿಲ್ಲ. ಅವತಾರ ರೂಪವಾದ ಆಕಾರವು ಸಿದ್ಧಿಸಬೇಕಾದರೂ ಸಹ, ಪರಮಾತ್ಮನಿಲ್ಲದ ರಿಕ್ತಸ್ಥಾನ ಒಂದು ಬೇಕಾಗುತ್ತದೆ; ಎರಡನೆಯದಾಗಿ, ಆ ಪರಮಾತ್ಮನು ಆವಶ್ಯಕತಾನುಸಾರ ಉದ್ದ-ಅಗಲಗಳನ್ನೂ, ಎತ್ತರ-ದಪ್ಪಗಳನ್ನೂ ಬದಲಾಯಿಸಿಕೊಳ್ಳಬೇಕಾದರೆ, ಏಕರಸನಾಗಿರದೆ, ಸಂಯೋಜನ - ವಿಭಾಜನ ಕ್ರಿಯೆಗಳಿಗೆ ಬಗ್ಗುವ ಖಂಡರೂಪವಾದ ತತ್ವವೇ ಆಗಿರಬೇಕಾಗುತ್ತದೆ. ಇಂತಹ ವಿಕಾರಿಗೆ ಪರಮಾತ್ಮಪದವಿ ಸಲ್ಲಬಲ್ಲದೇ ಎಂಬುದೇ ಸಾಕಾದಷ್ಟು ಗಂಭೀರವಾದ ಪ್ರಶ್ನೆಯಾಗಿದೆ,

ಮೂರನೆಯದಾಗಿ, ವಾದಿತೋಷನ್ಯಾಯದಿಂದ, ನಾವು ಪರಮಾತ್ಮನು ಹೇಗೆಹೇಗೋ ಅವತಾರವೆತ್ತಬಲ್ಲನೆಂದೇ ಇಟ್ಟುಕೊಳ್ಳೋಣ. ಆಗಲೂ ಸಹ, ಅಶರೀರನಾಗಿಯೇ ಇಷ್ಟು ದೊಡ್ಡ ಜಗತ್ತನ್ನು ಧರಿಸಬಲ್ಲ ಮತ್ತು ನಾಶಪಡಿಸಬಲ್ಲ ಪರಮಾತ್ಮನು, ಒಬ್ಬ ರಾವಣನನ್ನು ಅಥವಾ ಒಬ್ಬ ಕಂಸನನ್ನು ಕೊಲ್ಲಲಿಕ್ಕಾಗಿ ವರಾಹವಾಗಿ, ನರಸಿಂಹನಾಗಿ, ರಾಮನಾಗಿ ಅಥವಾ ಕೃಷ್ಣನಾಗಿ ಬರಬೇಕಾಗಿತ್ತೇ? ಎಂಬ ಪ್ರಶ್ನೆ ಎದ್ದೇಏಳುತ್ತದೆ. ಮಾನವರ ಮುಂದೆ ನೀತಿಯ ಮಾದರಿಯನ್ನಿಡಲಿಕ್ಕಾಗಿ ಭಗವಂತನು ಸ್ವತಃ ಶರೀರಧಾರಿಯಾಗಿ ಬರುತ್ತಾನೆಂದು ಹೇಳುವುದಾದರೆ—ಈಗಿರುವ ಅವತಾರದ ಕತೆಗಳನ್ನು ಓದಿ, ಅವತಾರಪುರುಷರಲ್ಲಿ ಎಳ್ಳಿನಷ್ಟಾದರೂ ದೋಷ ತೋರಿ

ಬರದಂತೆ ಪುನಃ ಬರೆಯ ಬೇಕಾಗುತ್ತದೆ. ಆದರೂ ಅಂತರ್ಯಾಮಿಯಾದ ಪರಮಾತ್ಮನು, ಅಂತರಂಗದಲ್ಲೇ ನೀತಿಯ ಬೆಳಕನ್ನು ತೋರಲಾರನೇ ? —ಎಂಬ ಪ್ರಶ್ನೆ ಹಾಗೆಯೇ ಉಳಿದುಹೋಗುತ್ತದೆ.

ನಾಲ್ಕನೆಯದಾಗಿ, ನಮ್ಮ ಮಿತ್ರರ ಚಿತ್ರವನ್ನು ನೋಡಿದರೆ ನಮಗವರ ಸ್ಮರಣೆಯುಂಟಾಗುವುದೆಂದು ನೀವು ಹೇಳಿದ ಮಾತನ್ನು ತೆಗೆದುಕೊಳ್ಳಿರಿ. ನಮ್ಮ ಮಿತ್ರರ ಚಿತ್ರವೆಂದು ಹೇಳಲ್ಪಡುವ ಚಿತ್ರವು, ವಾಸ್ತವವಾಗಿ ನಮ್ಮ ಮಿತ್ರರದೇ ಆಗಿದ್ದರೆ ನಮ್ಮ ಮಾತು ಸರಿಯಾದೀತು. ಅದೇರೀತಿ, ಇಂದು ದೇವಾಲಯಗಳಲ್ಲಿ ಕಾಣುವ ವಿಗ್ರಹಗಳು, ಛಾಯಾಗ್ರಾಹಿಯಿಂದ ಹಿಡಿದ ಅಥವಾ ಆಯಾ ಅವತಾರಗಳನ್ನು ಸ್ವತಃ ನೋಡಿದ್ದ ಶಿಲ್ಪಕಲಾಪ್ರವೀಣರು ಚಿತ್ರಿಸಿದ ಚಿತ್ರಗಳೆಂದು ಹೇಳಲು ಸಾಧ್ಯವಿದೆಯೇ? ಒಂದು ದೇವಾಲಯದ ರಾಮಚಂದ್ರನಮೂರ್ತಿಗೂ, ಇನ್ನೊಂದು ದೇವಾಲಯದ ರಾಮಚಂದ್ರನಮೂರ್ತಿಗೂ ಅರ್ಥಾಂತರ ಸಂಬಂಧವಿಲ್ಲದ ದೃಷ್ಟಾಂತವೆಷ್ಟಿಲ್ಲ? ಅನೇಕಬಾರಿ, ನಮ್ಮ ಸ್ವಂತ ಜೀವನದಲ್ಲಿಯೇ, ಅರ್ಚಕರನ್ನು—"ಸ್ವಾಮೀ, ಇದಾವ ದೇವರು?" ಎಂದು ಕೇಳಿ, ಪರಿಚಯ ಹೊಂದ ಬೇಕಾದ ಪ್ರಸಂಗಗಳೂ ಬಂದಿವೆ.

ಯಾವರೀತಿಯಲ್ಲಿ ನೋಡಿದರೂ ಇಂದಿನ ವಿಗ್ರಹಾರಾಧನೆ, ಜಗತ್ಪಿತನ ಸಾಕ್ಷಾತ್ಕಾರದ ಸಾಧನವೆಂದು ತೋರುವುದಿಲ್ಲ.

**ಪ್ರಶ್ನೆ** :—ಚಿತ್ರದ ವಿಷಯವಿನ್ನೂ ಸ್ಪಷ್ಟವಾಗಲಿಲ್ಲ. ನಿಮ್ಮ ಮಿತ್ರನ ಚಿತ್ರವನ್ನು ನೋಡಿ, ನೀವು ಮಿತ್ರನನ್ನು ಸ್ಮರಿಸುವಂತೆ, ದೇವಾಲಯಗಳಲ್ಲಿ ವಿಗ್ರಹಗಳನ್ನು ನೋಡಿ ಭಕ್ತರು ಭಗವಂತನನ್ನು ಸ್ಮರಿಸುತ್ತಾರೆ. ಹೊರಗೆ ಹುರುಳಿಲ್ಲದ ಕೆಟ್ಟಮಾತುಗಳನ್ನಾಡುವ ಒರಟನೂ ಸಹ, ದೇವಾಲಯವಲ್ಲಿ ಪಾದವಿಟ್ಟೊಡನೆ—"ಭಗವಂತ ! ನೀನೇ ಗತಿ." ಎಂದತ್ತ ಬೀಳುವುದನ್ನು ನೀವು ದಿನದಿನವೂ ನೋಡುತ್ತಿಲ್ಲವೇ?

**ಉತ್ತರ** :—ನಮ್ಮ ಮಿತ್ರನಿಗೆ ಆಕಾರವಿದೆ. ಆ ಆಕಾರದ ಪ್ರತಿಕೃತಿಯೂ ಸಾಧ್ಯವಿದೆ. ಆ ಪ್ರತಿಕೃತಿಯೂ ನಮ್ಮ ಮಿತ್ರನ ಆಕಾರದ ಪ್ರತಿಬಿಂಬವೇ

ಆಗಿರುವುದರಿಂದ, ನಾವು ಅವನನ್ನು ಸಹಜವಾಗಿಯೇ ಜ್ಞಾಪಿಸಿಕೊಳ್ಳುತ್ತೇವೆ. ಹಾಗಲ್ಲದೆ, ಯಾವುದೋ ಒಂದು ಸಂಬಂಧವಿಲ್ಲದ ಹಕ್ಕಿಯ ಅಥವಾ ಮೃಗದ ಚಿತ್ರವನ್ನು ನೋಡಿ, ನಾವು ನಮ್ಮ ಮಿತ್ರನನ್ನು ಜ್ಞಾಪಿಸಿಕೊಳ್ಳಲು ಸಾಧ್ಯವೇ? ನಿರಾಕಾರನಾದ ಪರಮಾತ್ಮನಿಗೆ, ಆಕಾರವಿಲ್ಲ; ಇನ್ನವನ ಪ್ರತಿಕೃತಿಯನ್ನಿಳಿಸುವ ಸಾಮರ್ಥ್ಯವಾರಿಗಿದೆ? ದೇವರ ಅವತಾರವೂ ಒಂದು ಅಸಂಭವ ಕಲ್ಪನೆಯೆಂದು ಮೇಲೆಯೇ ಹೇಳಿದ್ದೇವೆ. ಇನ್ನು, ದೇವರಲ್ಲದ, ದೇವರ ಅವತಾರಗಳೆಂದು ವೃಥಾ ಹೇಳಲ್ಪಡುವ ಮಹಾಪುರುಷರ ಕಲ್ಪಿತ ವಿಗ್ರಹಗಳನ್ನು ನೋಡಿ, ಭಗವಂತನ ನೆನಪಾಗುವುದೆಂದು ನೀವು ಯಾವ ಆಧಾರದಿಂದ ನಿರ್ಧರಿಸುತ್ತೀರಿ? ಆದರೂ ಸಹ, ನೀವು ಹೇಳುವಂತೆ, ದೇವಾಲಯಗಳಲ್ಲಿ ಪ್ರವೇಶಿಸಿ, "ನಮ್ಮಪ್ಪ! ನೀನೇ ಗತಿ" ಎಂದು ನೆಲಕ್ಕುರುಳಿ ತಮ್ಮ ಒರಟುತನವನ್ನು ಆಗ ಸದ್ಯಕ್ಕಾದರೂ ಬಿಡುವ ದುಷ್ಟರನೇಕರನ್ನು ನಾವೂ ಸಹ ನೋಡಿದ್ದೇವೆ. ಆದರೆ, ಮೂರ್ತಿಯನ್ನು ಕಂಡು ಭಗವತ್ಸ್ಮರಣೆಯುಂಟಾಗುವುದೆಂಬ ನಿಮ್ಮ ನಿರ್ಧಾರಮಾತ್ರ ನಮಗೆ ಮಾನ್ಯವಲ್ಲ. ಮೂರ್ತಿದರ್ಶನವೇ ಪರಮಾತ್ಮಸ್ಮರಣದ ಕಾರಣವಾಗಿದ್ದರೆ, ದೇವಾಲಯದಲ್ಲಿ ಕಾಲಿಟ್ಟ ಕ್ರೈಸ್ತರ, ಮುಸಲ್ಮಾನರ ಅಥವಾ ನಮ್ಮಂತಹ ನಿರಾಕಾರೇಶ್ವರೋಪಾಸಕರ ತಲೆಯೂ ತಾನಾಗಿಯೇ ಬಾಗಬೇಕಾಗಿತ್ತು; ಆದರೆ, ಹಾಗಾಗುವುದಿಲ್ಲ. ಇದರಿಂದ ವ್ಯಕ್ತವಾಗುವುದಿಷ್ಟೆ: ದೇವಾಲಯದಲ್ಲಿ ಕಾಲಿಟ್ಟ ವಿಗ್ರಹಾರಾಧಕರ ತಲೆಬಾಗುವುದರ ಕಾರಣ ಮೂರ್ತಿದರ್ಶನವಲ್ಲ; ಆ ಮೂರ್ತಿಗಳ ವಿಷಯದಲ್ಲಿ ಅವರು ಬಾಲ್ಯದಿಂದ ಕೇಳಿದ ನಾನಾವಿಧವಾದ ಕತೆಗಳಿಂದುಂಟಾದ ಒಂದು ಬಗೆಯ ಸಂಸ್ಕಾರ. ಆದುದರಿಂದಲೇ ಎಳೆಮಕ್ಕಳ ಅಂತರಂಗದ ಮೇಲೆ ಉತ್ತಮವಾದ ಸಂಸ್ಕಾರಗಳನ್ನುಂಟು ಮಾಡಬೇಕೆಂದು ವಿದ್ವಾಂಸರು ಹೇಳುವುದು.

ಎರಡನೆಯದಾಗಿ-"ದೇವಾಲಯಕ್ಕೆ ಹೋಗಬೇಕು"-ಎಂಬ ಸಂಕಲ್ಪದಿಂದ ಹೊರಡುವ ವಿಗ್ರಹಾರಾಧಕರ ಹೃದಯದಲ್ಲಿ, ಮೂರ್ತಿದರ್ಶನಕ್ಕಿಂತ ಮೊದಲೇ ಪರಮಾತ್ಮನ ಸ್ಮರಣೆಯುಂಟಾಗಿರುವುದೆಂಬುದನ್ನೂ ನಾವು

ಮರೆಯುವಂತಿಲ್ಲ. ಹಾಗಿಲ್ಲದಿದ್ದರೆ–ದೇವಾಲಯಗಳಿಗೆ ಹೋಗುವವರ ಸಂಖ್ಯೆ ಇಂದಿರುವುದರ ಲಕ್ಷದಲ್ಲೊಂದು ಪಾಲೂ ಇರುತ್ತಿರಲಿಲ್ಲ. ಇದರಿಂದ ಲೂ ಮೂರ್ತಿದರ್ಶನ ಪರಮಾತ್ಮಸ್ಮರಣದ ಮೂಲವಲ್ಲ; ಪರಮಾತ್ಮಸ್ಮರಣವೇ ಮೂರ್ತಿದರ್ಶನಾಕಾಂಕ್ಷೆಯ ಮೂಲ–ಎಂಬುದೇ ಸಿದ್ಧವಾಗುತ್ತದೆ.

ಮೂರನೆಯದಾಗಿ–ಸಂಕಲ್ಪವಿಲ್ಲದೆ ಹಠಾತ್ತಾಗಿ ದೇಗುಲದಲ್ಲಿ ಕಾಲಿಟ್ಟ ಒರಟನ ಹೃದಯದಲ್ಲಿ ಭಕ್ತಿ ಜಾಗೃತವಾಗುವ ಘಟನೆಯಿಂದ, ನಾವು ಕಲಿಯಬೇಕಾದ ಪಾಠವೇ ಬೇರೆ ಇರುತ್ತದೆ. ಮೂರ್ತಿಪೂಜನದ ಪ್ರಚಾರದಿಂದ ಆಗಿರುವ ಅಪಕಾರಗಳಲ್ಲಿ—"ದೇಗುಲ ಮಾತ್ರ ಪಾವನಸ್ಥಳ; ಅಲ್ಲೇ ಭಗವಂತನ ವಾಸ. ಅಲ್ಲಿ ಪಾಪಮಾಡಬಾರದು" ಎಂಬ ಸಂಕುಚಿತ ಭಾವನೆಯೂ ಒಂದು. ದೇವರು ದೇವಾಲಯದಲ್ಲಿ ವಾಸಮಾಡುತ್ತಾನೆಂಬ ಭಾವನೆಗೆ ಬದಲು, "ದೇವರು ಎಲ್ಲೆಡೆಯೂ ಇದ್ದಾನೆ; ಎಲ್ಲವೂ ಪವಿತ್ರವಾದ ಸ್ಥಳವೇ" ಎಂಬ ಭಾವನೆ ದೃಢವಾಗಿ ಆ ಒರಟನ ಹೃದಯದಲ್ಲಿ ಮೂಡಿದ್ದರೆ—ಅವನು ನೀಚನಾಗುವ ಸಂಭವ ಸಾವಿರ ಪಾಲಾದರೂ ಕಡಿಮೆಯಿರುತ್ತಿತ್ತು. ಏಕೆಂದರೆ, ಅವನ ಪಾಲಿಗೆ ಜಗತ್ತೆಲ್ಲಾ ದೇವಮಂದಿರವೇ ಆಗಿರುತ್ತಿತ್ತು.

ಪ್ರಶ್ನೆ :—ಧ್ಯೇಯಕ್ಕೊಂದು ಆಕಾರವೇ ಇಲ್ಲದಿದ್ದರೆ–ಉಪಾಸಕನ ಮನಸ್ಸು ನಿಲ್ಲುವುದೇತರಲ್ಲಿ? ಅವನು ಯಾವುದರ ಧ್ಯಾನವನ್ನು ಮಾಡಬೇಕು? ಆದುದರಿಂದ, ಧ್ಯಾನಮಾಡುವವರ ಚಿತ್ತವನ್ನು ಏಕಾಗ್ರಗೊಳಿಸಲು, ಯಾವುದಾದರೂ ಒಂದು ಸಾಧನರೂಪವಾದ ಆಕೃತಿ ಬೇಕಾಗುತ್ತದೆ. ಆ ಸಾಧನವಾಗಿ ಮೂರ್ತಿಗಳನ್ನು ಸ್ಥಾಪಿಸಿ, ಉಪಾಸಕರು ತಮ್ಮ ಚಿತ್ತಗಳನ್ನು ಅಲ್ಲಿಯೇ ಸ್ಥಿರಗೊಳಿಸುತ್ತಾರೆ. ಏಕೆಂದರೆ, ಸಾಕಾರಗ್ರಹಣವು ಸುಲಭವೆಂಬುದರಲ್ಲಿ ಸಂದೇಹವೇ ಇಲ್ಲ. ಮೇಲೇರುವವನಿಗೆ ಮೆಟ್ಟಿಲನ್ನು ಕಟ್ಟಿಕೊಡುವಂತೆ, ಮಹಾತ್ಮರ ಸಲುವಾಗಿ ಹಿರಿಯರು ಮೂರ್ತಿಗಳನ್ನು ಸ್ಥಾಪಿಸಿದ್ದಾರೆ. ಮೂರ್ತಿಗಳನ್ನೇ ದೇವರೆಂದು ನಂಬಬೇಕಾಗಿಲ್ಲ. ಕೇವಲ ಮನಃಸ್ಥೈರ್ಯದ ಒಂದು ಸಾಧನವಾಗಿ ಪೂರ್ವಜರು ಮೂರ್ತಿಪೂಜನವನ್ನಾರಂಭಿಸಿದ್ದಾರೆ.

**ಉತ್ತರ** :—ನಿಮ್ಮ ಹೇಳಿಕೆಯಂತೆ, ಮನವು ಸಾಕಾರವಸ್ತುವಿನಲ್ಲಿ ನಿಂತಿತೆಂದೇ ಭಾವಿಸೋಣ; ಆದರೆ—ಇದಾವ ಮಹತ್ಸಿದ್ಧಿ ? ಪ್ರಯತ್ನ ಪೂರ್ವಕವಾಗಿ ಸಾಧನೆ ಮಾಡಿ ಸಾಕಾರವಸ್ತುವಿನಲ್ಲಿ ಚಿತ್ತವನ್ನು ಏಕಾಗ್ರಗೊಳಿಸಲು ಕಲಿತಿರಿ. ಇದರಿಂದ ನೀವೇನು ಸಾಧಿಸಿದಂತಾಯಿತು? ಹೊರಟುದು ವ್ಯಾಪಕನಾದ ನಿರಾಕಾರ ಪರಮಾತ್ಮನಲ್ಲಿ ಮನಸ್ಸು ನಿಲ್ಲಿಸಲಿಕ್ಕೆ; ಕಲಿತುದು ವ್ಯಾಪ್ಯವಾದ ಸಾಕಾರವಸ್ತುವಿನಲ್ಲಿ ಮನ ನಿಲ್ಲಿಸಲಿಕ್ಕೆ. ಸಾಕಾರವಸ್ತುವನ್ನು ಗ್ರಹಿಸಲು ಕಲಿತ ಮನಸ್ಸು ಸಾಕಾರವಸ್ತುವನ್ನು ಗ್ರಹಿಸುತ್ತಿರುವುದೇ ಹೊರತು, ನಿರಾಕಾರ ತತ್ವವನ್ನು ಗ್ರಹಿಸಲಾರದು. ಎಂದಮೇಲೆ—ವಿಗ್ರಹದಲ್ಲಿ ಮನಸ್ಸು ನಿಲ್ಲಿಸಲು ಕಲಿತು ಸಾಧಿಸಿದ ಸಿದ್ಧಿ ಯಾವುದು ?

ಮೂರ್ತಿಪೂಜೆಯು ಪರಮಾತ್ಮಸಾಕ್ಷಾತ್ಕಾರದ ಒಂದು ಹಂತವೆನ್ನುವ ಮಾತಿಗೂ ಅರ್ಥವಿಲ್ಲ. ಅದು ನಿಜವಾಗಿ ಒಂದು ಹಂತವೇ ಆಗಿದ್ದರೆ, ಮೂರ್ತಿಪೂಜೆಯಿಂದಾರಂಭಿಸಿ, ಅದನ್ನುದಾಟಿ ಮುಂದಕ್ಕೆ ಹೋದ ಭಕ್ತರು ನಮಗೆ ಗೋಚರಿಸಬೇಕಾಗಿತ್ತು. ಆದರಿಂದು ನಾವು ನೋಡುತ್ತಿರುವುದೇನು? ಆರೇಳುವರ್ಷದ ಅರಿವಿಲ್ಲದ ತರಳ ದೇಗುಲಕ್ಕೆ ಪೂಜಿಸಲು ಹೋಗುತ್ತಾನೆ; ತಲೆಗೂದಲು ನೆರೆತು, ಶರೀರ ಹಣ್ಣಾಗಿ ಕಳೇಬರವನ್ನು ಕಿತ್ತೊಗೆವ ಸಂದರ್ಭಬಂದಾಗಲೂ ಅದೇ ವಿಗ್ರಹಕ್ಕೆ ಹರಕೆಹೊತ್ತು ಹೊರಟುಹೋಗುತ್ತಾನೆ. ಮುಂದುವರಿವ ಕಲ್ಪನೆಯೇ ಇಲ್ಲ! ಇದೆಂತಹ ಮೆಟ್ಟಿಲು? ಚೇತನ ಪರಮಾತ್ಮನಲ್ಲಿ ನಿಲ್ಲಬೇಕಾದ ಚಿತ್ತ ಜಡವಿಗ್ರಹಕ್ಕೆ ಕಟ್ಟುಬಿದ್ದು ಸೂರೆ ಹೋಯಿತು! ವ್ಯಾಪಕನನ್ನು ಮರೆಮಾಡಿ, ವ್ಯಾಪ್ಯವನ್ನೇ ಮನಶ್ಚಕ್ಷುವಿನೆದುರು ನಿಲ್ಲಿಸುವ ಮೂರ್ತಿಪೂಜೆಯೂ ಒಂದು ಹಂತವೇ ?

**ಪ್ರಶ್ನೆ** :—ಜ್ಞಾನವಂತರಾದ ಮಹಾತ್ಮರು ನಿರಾಕಾರನಾದ ಪರಮಾತ್ಮನನ್ನು ಧ್ಯಾನಿಸಬಲ್ಲರು. ಆದರೆ, ಪ್ರಪಂಚದಲ್ಲೆಲ್ಲರೂ ಜ್ಞಾನಿಗಳೇ ಆಗಿಲ್ಲ. ಅಜ್ಞಾನ ದೂಷಿತರಾದ ಅಲ್ಪಮೇಧಾವಿಗಳೂ ಬಹುಮಂದಿ ಇದ್ದಾರೆ. ಅಂತಹ ಅಜ್ಞಾನಿಗಳು, ಕಣ್ಣೆದುರಿಗೇನೂ ಇಲ್ಲದಿದ್ದರೆ, ದೇವರೇ ಇಲ್ಲವೆಂದು ಭಾವಿಸುತ್ತಾರೆ. ಅಂತಹ ಅಲ್ಪಬುದ್ಧಿಗಳನ್ನುದ್ಧರಿಸಲಿಕ್ಕಾಗಿಯೇ ನಮ್ಮ ಪೂರ್ವಜರು ಮೂರ್ತಿಪೂಜೆಯನ್ನಾರಂಭಿಸಿದ್ದಾರೆ. ಕಾಡಿನಲ್ಲಿರುವ ಆನೆ

ಯನ್ನು ನೋಡಬೇಕೆಂದು ಮಗುವು ರೋದಿಸುತ್ತದೆ; ಆದರೆ, ತಾಯಿಗೆ ಆ ಆನೆಯನ್ನು ತೋರಿಸಲು ಸಾಧ್ಯವಾಗುವುದಿಲ್ಲ. ಆಗ ಆಕೆಯು, ಮಗುವಿನ ಕೈಗೆ ಆನೆಯ ಬೊಂಬೆಯೊಂದನ್ನು ಕೊಟ್ಟು—"ಕಂದ! ನೋಡಿಲ್ಲಿ ಆನೆ" ಎಂದು ಹೇಳುತ್ತಾಳೆ. ಆಗ ಶಿಶುವು ಅದನ್ನೇ ಆನೆಯೆಂದು ಭಾವಿಸಿ ನಲಿಯುತ್ತದೆ. ಅದು ಕೇವಲ ಆನೆಯ ಚಿತ್ರವೇ ಹೊರತು ಆನೆಯಲ್ಲ; ಆದರೆ, ಮಗುವಿಗೇನೋ ಆನಂದವಾಗಿಯೇ ಆಯಿತು. ಅದೇರೀತಿ, ಮೂಢಾತ್ಮರು ಪರಮಾತ್ಮನ ದರ್ಶನಮಾಡಲು ಬಯಸುತ್ತಾರೆ. ಆದರೆ, ಅಲ್ಪಮತಿಗಳಾದುದರಿಂದ ಆ ಶಕ್ತಿಯಿರುವುದಿಲ್ಲ. ಅಂತಹ ಸಂದರ್ಭದಲ್ಲಿ, ದಯಾಳುಗಳಾದ ಮಹಾತ್ಮರು, ಮೂರ್ತಿಗಳನ್ನು ಸ್ಥಾಪಿಸಿ–"ಬಂಧುಗಳೇ! ನೋಡಿರಿ; ಭಗವಂತನಿಲ್ಲಿದ್ದಾನೆ" ಎಂದು ಬೋಧಿಸುತ್ತಾರೆ. ಆ ಮೂಢರು, ಮೂರ್ತಿಗಳಲ್ಲೇ ಭಗವಂತನನ್ನು ಭಾವಿಸಿಕೊಂಡು ಪೂಜಿಸುತ್ತಾರೆ. ಅದರಿಂದ ಅವರಿಗೆ ಆತ್ಮತೃಪ್ತಿಯೂ ಸಹ ಲಭಿಸುತ್ತದೆ. ದಯಾಮಯನಾದ ದೇವರು, ಅವರ ಭಕ್ತಿಯುತವಾದ ಪೂಜೆಯನ್ನು ಸ್ವೀಕರಿಸಿಯೇ ಸ್ವೀಕರಿಸುತ್ತಾನೆ. ಇದರಲ್ಲಿ ದೋಷವೇನಿದೆ?

**ಉತ್ತರ**:-ಧಾರ್ಮಿಕವಿಷಯ ಜ್ಞಾನಪ್ರಧಾನವಾದುದೇ ಹೊರತು, ಅಜ್ಞಾನದ ನೆಪದಿಂದ ಪತನಹೊಂದುವುದು ಧರ್ಮದ ವಿಷಯವಲ್ಲ. ಸತ್ಯವನ್ನು ಮರೆಯಬೇಡಿ. ಒಂದು ಉನ್ನತವಾದ ಪರ್ವತದಮೇಲೆ ನಿಮ್ಮ ಮನೆಯಿದೆ ಎಂದು ಭಾವಿಸಿರಿ. ನೀವಿಲ್ಲಿಗೆ ಹೋಗಬೇಕಾಗಿದೆ ಆದರೆ, ನಿಮ್ಮ ಕಾಯಶಕ್ತಿ ಕಡಿಮೆಯಿರುವುದರಿಂದ ನಿಮಗೆ ಮೇಲೆ ಹತ್ತುವಾಗ ಅತಿ ಕ್ಲೇಶವುಂಟಾಗುವುದೆಂದು ಭಾವಿಸಿ, ಸುಲಭವಾಗಲೆಂಬ ಉದ್ದೇಶ್ಯದಿಂದ, ಕೊಳವಲ್ಲಾಗಲೀ ಭಾವಿಯಲ್ಲಾಗಲೀ ಇಳಿಯಲಾರಂಭಿಸುತ್ತೀರೇನು? ಹಾಗಿಳಿದಲ್ಲಿ—ನೀವು ನಿಮ್ಮ ಮನೆಯನ್ನು ಸೇರಿದಂತಾಗುವುದೇನು? ಅದೇರೀತಿ, ನಿರಾಕಾರ ಪರಮಾತ್ಮನ ಉಪಾಸನೆ ಕಷ್ಟವೆಂದು ಭಾವಿಸಿ, ಅವನ ಗೋಜನ್ನೇ ಬಿಟ್ಟು, ಜಡ ವಿಗ್ರಹಗಳನ್ನು ಪೂಜಿಸುತ್ತಾ ಕುಳಿತರೆ, ಇಷ್ಟಸಿದ್ಧಿಯಾದಂತಾಯಿತೇ? ಅದೇರೀತಿ, ತಾಯಿ ಎಷ್ಟು ಹೇಳಿದರೂ ಅದೊಂದು ಆನೆಯ ಚಿತ್ರವೇ

ಹೊರತು—ಆನೆಯಾಗಲಾರದು. ಸ್ವಲ್ಪ ಯೋಚನೆಮಾಡಿರಿ : ಈ ವ್ಯವಹಾರದಲ್ಲಿ ವಂಚನೆಯಿಲ್ಲವೇ ? ನೀವು ಸಕ್ಕರೆ ಕೇಳುತ್ತೀರಿ; ನಮ್ಮಲ್ಲಿ ಸಕ್ಕರೆಯಿಲ್ಲ. ಉಪ್ಪನ್ನು ತೆಗೆದು ಸಕ್ಕರೆಯೆಂದು ನಿಮ್ಮ ಬಾಯಿಗೆ ಹಾಕಿಬಿಡುತ್ತೇವೆ. ಆಗ ನಿಮ್ಮ ಬಾಯಿ ಸಿಹಿಯಾಗುವುದೇ ? ನಮ್ಮನ್ನು ನೀವು ಮೋಸಗಾರರೆಂದು ಭಾವಿಸುವುದಿಲ್ಲವೇ ? ಆತ್ಮತೃಪ್ತಿಯ ವಿಷಯದಲ್ಲಿಯೂ ನೀವು ಹೇಳಿದ ಮಾತು ಯುಕ್ತವಲ್ಲ. ಶಿಶುವಿಗೆ, ಗೊಬ್ಬರದ ಗುಂಡಿಯಲ್ಲಿ ಆಟವಾಡುವಾಗ ಆನಂದವಾಗುತ್ತದೆಂಬುದು ನಿಜ; ಆದರೆ—ಮಮತಾಮೂರ್ತಿಯಾದ ತಾಯಿಯ ಕರ್ತವ್ಯವೇನು ? ಮಗು ಆತ್ಮತೃಪ್ತಿಯಲ್ಲಿ ಲೀನವಾಗಿದೆ—ಎಂದು ಹಾಗೆಯೇ ಬಿಟ್ಟುಬಿಡಬೇಕೇ ? ಅದನ್ನು ಗೊಬ್ಬರದ ಗುಂಡಿಯಿಂದೆತ್ತಿ, ಮೈತೊಳೆದು, ಚೊಕ್ಕಟಮಾಡಬಾರದೆ ?

ಭಾವನೆಯವಿಷಯ ಮೊದಲೇ ಹೇಳಿದ್ದೇವೆ. ಕುರಿ, ಕೋಣ, ಕೋಳಿ ಮೊದಲಾದ ಮೂಕಜಂತುಗಳನ್ನು ಭಗವಂತನ ಹೆಸರಿನಲ್ಲಿ ಬಲಿಕೊಡುವ ಪಾಮರರಾದರೂ ಅದರಿಂದ ನಿಜವಾಗಿ ಭಗವತ್ಪ್ರೀತಿಯಾಗುವುದೆಂಬ ಭಾವನೆಯಿಂದಲೇ ರಕ್ತದ ಕೋಡಿಯನ್ನು ಹರಿಸುತ್ತಾರೆ. ಅಂದ ಮಾತ್ರಕ್ಕೆ—ಮೂಕಪ್ರಾಣಿವಧೆಯ ಪಾಪ ಅವರಿಗೆ ತಟ್ಟುವುದೇ ಇಲ್ಲವೆ ? 'ಭಾವ' ಎಂಬ ಮಾತಿನ ಅರ್ಥವೇ "ಇರುವಿಕೆ" ಎಂದು ; ಇರುವುದನ್ನಿರುವಂತೆ ತಿಳಿದುಕೊಳ್ಳುವುದೇ ಭಾವನೆ! ಇಲ್ಲದುದನ್ನೂಹಿಸುವುದೊಂದು ಕಲ್ಪನೆಯೇ ಹೊರತು ಭಾವನೆಯಲ್ಲ.

**ಪ್ರಶ್ನೆ** :—ನಗ್ನ ಹಾಗೂ ಉದ್ದೀಪಕ ಚಿತ್ರಗಳನ್ನು ನೋಡಿ, ದರ್ಶಕನ ಮನಸ್ಸು ಕಲುಷಿತವಾಗುವಂತೆಯೇ, ದೇವಾಲಯಗಳಲ್ಲಿ ಶಾಂತವೂ, ಸುಂದರವೂ ಆದ ಮೂರ್ತಿಗಳನ್ನು ನೋಡಿ ಮನಸ್ಸೂ, ಸಹ ಶಾಂತವೂ, ಉಲ್ಲಾಸಯುಕ್ತವೂ ಆಗುವುದು ಅಂತಹ ಶಾಂತ ಮನಃಸ್ಥಿತಿಯಲ್ಲಿ ಪರಮಾತ್ಮನ ಸ್ಮರಣೆ ತಾನಾಗಿಯೇ ಉಂಟಾಗುವುದು.

**ಉತ್ತರ** :—ಈ ನಿಮ್ಮ ಯುಕ್ತಿ ಪ್ರಬಲವಾಗಿರುವಂತೆ ತೋರುವುದಾದರೂ ಗಂಭೀರ ವಿವೇಚನೆಯಮುಂದೆ ಇದು ನಿಲ್ಲಲಾರದು. ಮಾನವನ ಮನಸ್ಸಿನ

ಸ್ವಭಾವವನ್ನು ಚೆನ್ನಾಗಿ ಚಿಂತಿಸಿರಿ. "ಗುಡ್ಡ ಕೊರೆದರೆ ಗಡಸುಹಾದಿ; ಹಳ್ಳಕ್ಕೆ ಹಲವಾರು ಹಾದಿ" —ಎಂಬ ಮಾತನ್ನು ಮರೆಯಬೇಡಿ. ನಗ್ನಚಿತ್ರಗಳು ಮನಸ್ಸನ್ನು ಕೆಡಿಸುವಷ್ಟು ಬೇಗ, ಶಾಂತ ಚಿತ್ರಗಳು ಮನಸ್ಸನ್ನು ಶುದ್ಧಗೊಳಿಸಲಾರವು. ಉನ್ನತ ಶ್ರೇಣಿಯ, ಚಿತ್ತಾಕರ್ಷಕ ಶಿಲ್ಪಕಲೆ, ಮಾನವನ ಆತ್ಮ ವಿಕಾಸದ ಅಭಿವ್ಯಕ್ತಿಯೆಂದು ನಾವೂ ಸಹ ಒಪ್ಪುತ್ತೇವೆ. ಆದರೆ, ಪವಿತ್ರವಾದ ಶಿಲ್ಪಕಲೆಯಂತಹ ಉನ್ನತವಿದ್ಯೆಯ ನೆರಳಿನಲ್ಲಿ, ಮೂರ್ತಿಪೂಜೆಯಂತಹ ಅಜ್ಞಾನ-ಪ್ರಕ್ರಿಯೆಯನ್ನು ಪ್ರಸರಿಸುವುದನ್ನು ನಾವು ಒಪ್ಪಲಾರೆವು. ಸುಂದರ ವಾಸ್ತುಶಿಲ್ಪವನ್ನು ನೋಡಿ ಆನಂದಿಸುವ ಹಕ್ಕು ಪ್ರತಿಯೊಬ್ಬನಿಗೂ ಉಂಟು. ಆದರೆ, ಈ ನಿಮ್ಮ ಭಾರತವರ್ಷದಲ್ಲಿ, ತಿರುಪತಿ ವೆಂಕಟರಮಣಸ್ವಾಮಿ, ಕಾಳೀಘಾಟಿನ ಕಾಳೀದೇವಿಯಂತಹ, ಸ್ವಪ್ನದಲ್ಲಿ ಚಿಟ್ಟನೆ ಚೀರಿಕೊಳ್ಳುವಂತೆ ಮಾಡುವ ಮೂರ್ತಿಗಳೇ ಅಧಿಕವಾಗಿವೆಯೇ ಹೊರತು, ಹಳೇಬೀಡು-ಬೇಲೂರು, ಎಲ್ಲೋರ-ಅಜಂತಗಳಂತಹ ಶಿಲ್ಪಕಲಾಕೇಂದ್ರಗಳು ಬಹುಕಡಿಮೆ. ಒಂದುವೇಳೆ, ಎಲ್ಲಾ ದೇವಾಲಯಗಳ ಮೂರ್ತಿಗಳೂ ಮುದ್ದಾಗಿಯೇ ಇವೆಯೆಂದು ಭಾವಿಸೋಣ. ಆದರೆತಾನೇ, ಬಂದ ಭಾಗ್ಯವೇನು ? ಮೂರ್ತಿಪೂಜೆಯ ದೃಷ್ಟಿಯಿಂದ—ಸುರೂಪ ಕುರೂಪಗಳಿಗೇನೂ ಭೇದವಿಲ್ಲ.

ಸುಂದರವಾದ ವಿಗ್ರಹಗಳನ್ನು ನೋಡಿದಾಗ, ನ್ಯಾಯವಾಗಿ ನೆನಪಾಗುವುದು ಪರಮಾತ್ಮನದಲ್ಲ; ಆ ವಿಗ್ರಹಗಳನ್ನು ಕೆತ್ತಿದ ಶಿಲ್ಪಕಲಾಪ್ರವೀಣನದು ನಾವು ರಚಿಸಿದ ಗ್ರಂಥವನ್ನು ನೋಡಿ ನಿಮಗೆ ನಮ್ಮ ನೆನಪಾಗುವುದೇ ಹೊರತು, ಬೇರೊಬ್ಬನ ನೆನಪಾಗಲಾರದು. ಆದರೂ, ದೇವಾಲಯಗಳಿಗೆ ಕಾಲಿಟ್ಟಾಗ, ಪರಮಾತ್ಮನ ನೆನಪಾಗುವುದು ಮೂರ್ತಿದರ್ಶನದಿಂದಲ್ಲ; ಹಿಂದಿನವರು ಹಾಕಿಟ್ಟ ಸಂಸ್ಕಾರದ ಒತ್ತಡದಿಂದ—ಎಂದು ಮೊದಲೇ ಹೇಳಿದ್ದೇವೆ.

ನಿಜವಾಗಿ, ಪರಮಾತ್ಮನ ನೆನಪಾಗಬೇಕಾದರೆ—ಪರಮಾತ್ಮನ ಅದ್ಭುತ ರಚನೆಯಾದ ಸೂರ್ಯ-ಚಂದ್ರ-ನಕ್ಷತ್ರ ಮಂಡಲಗಳ ಅವಲೋಕನದಿಂದ;

ಗಗನಸ್ಪರ್ಶೀ ಪರ್ವತಶ್ರೇಣಿ ಹಾಗೂ ಉತ್ತಾಲತರಂಗರಂಗಿಣೀ ನದೀನಾಲೆಗಳ ನಿರೀಕ್ಷಣದಿಂದ; ಅದ್ಭುತ ವೀಚೀಪ್ರಸ್ತಾರಪ್ರಕ್ಷುಬ್ಧ ಅಥವಾ ನಿತಾಂತ ಪ್ರಶಾಂತ ಅನಂತ ಸಾಗರದ ದರ್ಶನದಿಂದ. ಇದನ್ನು ಬಿಟ್ಟು ಮನುಷ್ಯಕೃತಿಯಾದ ವಿಗ್ರಹಗಳ ನೋಟದಿಂದ ಭಗವತ್ಸ್ಮರಣವಾಗುವುದೆಂದು ಹೇಳುವುದು ಸಂಸ್ಕಾರದೋಷಮಾತ್ರ. ಈ ಸಂಸ್ಕಾರದಿಂದ ಸಂಕುಚಿತಭಾವನೆ ಹೇಗೆ ಬೆಳೆಯುವುದೆಂದು ಹಿಂದೆಯೇ ಹೇಳಿದ್ದೇವೆ.

**ಪ್ರಶ್ನೆ** :—ಭಯಾನಕ ಮೂರ್ತಿಗಳ ವಿಷಯದಲ್ಲಿ ನಿಮಗೆ ತಪ್ಪಭಿಪ್ರಾಯವಿದೆ. ಅವು ಕಲಾಹೀನವಲ್ಲ; ಪರಮಾತ್ಮನ ಉಗ್ರರೂಪವನ್ನು ನಿಟ್ಟಿಸಿಯಾದರೂ ಪಾಪಿಗಳು ಪಾಪವನ್ನು ಬಿಡಲೆಂಬ ಉದ್ದೇಶ್ಯದಿಂದ, ಕರಾಳವಿಗ್ರಹಗಳ ರಚನೆಯಾಗಿದೆ.

**ಉತ್ತರ** :—ನಗರಕ್ಕೆ ನಗರವನ್ನೇ ನೆಲಸಮಮಾಡುವ ಭೂಕಂಪ, ದೇಶದೇಶವನ್ನೇ ಒರಸಿಹಾಕುವ ನದೀಪ್ರವಾಹ,ಅರೆಕ್ಷಣದಲ್ಲಿ ಸಿಕ್ಕಿದುದನ್ನು ಸೀಳಿ ಭಸ್ಮಮಾಡುವ ಸಿಡಿಲು–ಇಂತಹ ಜಗದೀಶ್ವರನ ಉಗ್ರದಂಡದ ಪ್ರಚಂಡ ಚಿಹ್ನೆಗಳನ್ನು ಎಷ್ಟೋಸಾರಿ ನೋಡಿಯೂ ಸಹ ಪಾತಕಿಗಳು ತಮ್ಮ ಪಾಪವನ್ನು ಬಿಡಲಿಲ್ಲ; ಇನ್ನು ಕುರೂಪವಾದ ಜಡಬೊಂಬೆಗಳನ್ನು ನಿಟ್ಟಿಸಿ ಪಾಪ ಭಾವನೆಯನ್ನು ಬಿಡುವರೆಂದು ಹೇಳುವುದುಕೇವಲ ವಾದಕ್ಕಾಗಿ ರಚಿಸಿದ ಯುಕ್ತಿ ಮಾತ್ರ.

**ಪ್ರಶ್ನೆ** :—ಒಳ್ಳೆಯದು. ಪರಮಾತ್ಮನು ನಿರಾಕಾರನೇ ಆಗಿರಲಿ. ಆದರೆ, ಭಕ್ತರು ಯಾವ ರೂಪವನ್ನೂಹಿಸುತ್ತಾರೋ ಅದೇ ಆಕಾರದವನಾಗುತ್ತಾನೆ. ಕೆರೆಯಲ್ಲಿರುವ ನೀರಿಗೆ ಯಾವ ಆಕಾರವಿದೆ ? ಆದರೂ, ಅದನ್ನು ಯಾವ ಆಕಾರದ ಪಾತ್ರೆಯಲ್ಲಿ ತುಂಬಿದರೆ—ನೀರೂ ಅದೇ ಆಕಾರವುಳ್ಳದಾಗುತ್ತದೆ. ಆದರೆ, ನೀರು ಸ್ಥೂಲವಾದ ವಸ್ತುವಾದುದರಿಂದ, ಸ್ಥೂಲವಾದ ಪಾತ್ರೆಯ ಭಿತ್ತಿಯಿಂದ ಸುತ್ತಲ್ಪಡುತ್ತದೆ. ಪರಮಾತ್ಮನು ಸೂಕ್ಷ್ಮವಾದ ಕಲ್ಪನಾ ಶಕ್ತಿಯ ಉಪಾಧಿಯಿಂದ ಇಚ್ಛಿತಾಕಾರವಂತನಾಗುತ್ತಾನೆ.

**ಉತ್ತರ** :—ಈ ದೃಷ್ಟಾಂತವೇ ಸರಿಯಲ್ಲ. ನೀರು ಆಕಾರವುಳ್ಳ ಮತ್ತು ಖಂಡರೂಪವಾದ ವಸ್ತು. ಅದರ ಪ್ರತಿಯೊಂದು ಬಿಂದುವನ್ನೂ ನಾವು ಬೇರೆ ಬೇರೆ ಮಾಡಬಹುದು. ಒಂದು ನಿರ್ದಿಷ್ಟಬಿಂದು ಸಮೂಹ, ಆ ಪಾತ್ರೆಯೊಳಗೆ ನುಗ್ಗುತ್ತದೆ. ಆ ಪಾತ್ರಸ್ಥ ಬಿಂದು-ಸಮೂಹವನ್ನು, ಪಾತ್ರೆಯು ಬಿತ್ತಿಯು ಕೆರೆಯ ಉಳಿದ ನೀರಿನಿಂದ ಬೇರೆಮಾಡುತ್ತವೆ. ಆಗ, ಆ ಪಾತ್ರೆಯ ನೀರಿನ ಆಕಾರ, ಪಾತ್ರೆಯ ಆಕಾರದಂತಿವೆ-ಎಂದು ಹೇಳಬಹುದು. ಆಗಲೂ ಸಹ, ತತ್ವಜ್ಞರು ಅದನ್ನು ಪಾತ್ರೆಯ ಆಕಾರವೆಂದು ಹೇಳಬೇಕೇ ಹೊರತು, ನೀರಿನ ಆಕಾರವೆಂದು ಹೇಳುವಂತಿಲ್ಲ. ನೀರು ಖಂಡರೂಪವಾಗಿಲ್ಲದೆ, ಅಖಂಡವಾಗಿದ್ದರೆ, ಅದನ್ನು ಆ ಪಾತ್ರೆಯಲ್ಲಿ ತುಂಬಲಾಗುತ್ತಿದ್ದಿತೆ? ಆ ಪಾತ್ರೆಯ ಭಿತ್ತಿಯಲ್ಲಿಯೂ, ಆದರಿಂದ ಹೊರಗೂ ನೀರೇ ತುಂಬಿಕೊಂಡಿದ್ದರೆ-ಆಗ ನೀರು ಪಾತ್ರೆಯ ಆಕಾರವೆಂದು ಹೇಳಲು ಆಗುತ್ತಿತ್ತೇ? ಅಖಂಡನಾದ ಪರಮಾತ್ಮನನ್ನು ಖಂಡ ಖಂಡವಾಗಿ ಊಹಿಸುವುದು ಕೇವಲ ಒಂದು ಊಹೆಯೇ ಹೊರತು, ಪರಮಾತ್ಮನ ಆಕಾರವಾಗಲಾರದು. ಕಲ್ಪನೆಯೆಲ್ಲಾ ಕಲ್ಪನೆಯೇ ಆದಮೇಲೆ, ಸ್ಥೂಲ-ಸೂಕ್ಷ್ಮಗಳ ವಿವೇಚನೆ ಅನಾವಶ್ಯಕ.

**ಪ್ರಶ್ನೆ** :—ಸರ್ವವ್ಯಾಪಿಯಾದ ಪರಮಾತ್ಮ ವಿಗ್ರಹದಲ್ಲಿಯೂ ಇದ್ದೇ ಇದ್ದಾನೆ. ನಾವು ಒಂದು ಪುಸ್ತಕವನ್ನು ಒಂದು ಪೆಟ್ಟಿಗೆಯಲ್ಲಿಡುತ್ತೇವೆ. ಒಬ್ಬ ಬಾಲಕನು ಆ ಪುಸ್ತಕವನ್ನು ಹುಡುಕುತ್ತಾ ವೃಥಾ ಅತ್ತಿಂದಿತ್ತ ಅಲೆದಾಡುತ್ತಾನೆ. ಅದನ್ನು ಕಂಡ ನಾವು "ಮಗು! ವೃಥಾ ಶ್ರಮಿಸುತ್ತೀಏಕಪ್ಪ! ಆ ಪುಸ್ತಕ ಈ ಪೆಟ್ಟಿಗೆಯಲ್ಲಿದೆ? ತೆಗೆದುಕೋ" ಎಂದು ಹೇಳಬಾರದೇ? ಅದೇ ರೀತಿ, ಭಗವಂತನಲ್ಲಿದ್ದಾನೆ, ಇಲ್ಲಿದ್ದಾನೆ ಎಂದು ಅಲೆದಾಡುವ ಪಾಮರರಿಗೆ—"ಬಾಂಧವರೇ! ಈ ಮೂರ್ತಿಯಲ್ಲಿಯೂ ದೇವರಿದ್ದಾನೆ. ವೃಥಾ ಏಕೆ ಆತನನ್ನು ಹುಡುಕುತ್ತಾ ಅಲೆಯುತ್ತೀರಿ? ಇಲ್ಲಿಯೇ ಅವನನ್ನು ಸಾಕ್ಷಾತ್ಕಾರ ಮಾಡಿಕೊಳ್ಳಿ" ಎಂದು ಹೇಳಿದರೆ ಅದರಲ್ಲಿ ತಪ್ಪೇನಿದೆ? "ದೇವನಲ್ಲಿದ್ದಾನೆ, ಇಲ್ಲಿದ್ದಾನೆ" ಎಂದು ಓಡಾಡುವವರ ಬುದ್ಧಿ ಹೇಗೆತಾನೇ ಸ್ಥಿರವಾದೀತು?

**ಉತ್ತರ** :—"ಏಕದೇಶಿಯಾದ ಪುಸ್ತಕ ಪೆಟ್ಟಿಗೆಯಲ್ಲಿಯೇ ಇದೆ? ಬೇರೆಲ್ಲಿಯೂ ಇಲ್ಲ" ಎಂದು ಹೇಳಲು ಸಾಧ್ಯ; ಆದರೆ–ಸರ್ವವ್ಯಾಪಕನಾದ ದೇವರು–"ಇಲ್ಲಿಯೇ ಇದ್ದಾನೆ, ಬೇರೆಲ್ಲಿಯೂ ಇಲ್ಲ" ಎಂದು ಹೇಳಲಾಗುತ್ತದೆಯೇ? ಎರಡನೆಯದಾಗಿ–ನಿಮ್ಮ ಹೇಳಿಕೆಯನ್ನೇ ಅಂಗೀಕರಿಸಿ, ದೇವರು ವಿಗ್ರಹದಲ್ಲಿ ಮಾತ್ರವೇ ಇದ್ದಾನೆಂದು ಭಾವಿಸೋಣ. ಹಾಗಿದ್ದರೂ—ವ್ಯಾಪ್ಯವ್ಯಾಪಕ ಸಂಬಂಧದ ಜಟಿಲಪ್ರಶ್ನೆ ಎದ್ದೇ ಏಳುತ್ತದೆ. ಆ ಹುಡುಗನು, ಆ ಪೆಟ್ಟಿಗೆಯಲ್ಲಿರುವ ಪುಸ್ತಕವನ್ನು ತೆಗೆದುಕೊಂಡರೇನೋ ಸರಿ; ಅದನ್ನು ಬಿಟ್ಟು, ಆ ಪೆಟ್ಟಿಗೆಯನ್ನೇ ಪುಸ್ತಕವೆಂದು ಭಾವಿಸಿ, ಅದನ್ನೇ ಕಂಕುಳಲ್ಲಿಟ್ಟುಕೊಂಡು ತಿರುಗಿದರೆ–ಅವನು ಆ ಪುಸ್ತಕದಿಂದ ಲಾಭ ಪಡೆದಂತಾಯಿತೇ? ಅದೇರೀತಿ, ಮೂರ್ತಿಯಲ್ಲಿರುವ ನಿರಾಕಾರನಾದ ಪರಮಾತ್ಮನನ್ನು ಬಿಟ್ಟು ಮೂರ್ತಿಯನ್ನೇ ಪರಮಾತ್ಮನೆಂದು ಭಾವಿಸಿ, ಧೂಪ ದೀಪ ನೈವೇದ್ಯಾದಿಗಳಿಂದನ್ನು ಪೂಜಿಸಿದರೆ, ಪರಮಾತ್ಮನ ಸಾಕ್ಷಾತ್ಕಾರವಾದಂತಾಯಿತೇ? ಈ ರೀತಿ ಮೂರ್ತಿಗಳ ಬಾಹ್ಯಪೂಜೆಯು ಮೂರ್ತಿಪೂಜೆಯೇ ಹೊರತು ಪರಮಾತ್ಮನ ಪೂಜೆ ಎಂದಿಗೂ ಆಗಲಾರದು ಹೊರಗಿನಿಂದ ಅವುಗಳನ್ನು ಪೂಜಿಸದಿದ್ದರೆ, ಅವುಗಳ ಆವಶ್ಯಕತೆಯೇ ಇರುವುದಿಲ್ಲ. ಏಕೆಂದರೆ, ಮೂರ್ತಿಗಳು, ಸಾಕಾರ ವಸ್ತುಗಳಲ್ಲಿ ಚಿತ್ತವನ್ನು ನಿಲ್ಲಿಸಲು ಸಹಾಯಕವಾಗುವುವೇ ಹೊರತು, ನಿರಾಕಾರ ಪರಮಾತ್ಮನ ಧ್ಯಾನಕ್ಕೆ ಎಳ್ಳಿನಷ್ಟಾದರೂ ನೆರವಾಗಲಾರದೆಂದು ನಾವು ಅನೇಕ ಸಾರಿ ಹೇಳಿದ್ದೇವೆ.

ಇನ್ನು ನಿರಾಕಾರ ಪರಮಾತ್ಮನ ಉಪಾಸಕರು ವೃಥಾ ಅತ್ತಿಂದಿತ್ತ ಅಲೆದಾಡಬೇಕೆಂಬ ವಾದಕ್ಕೂ ಆಧಾರವಿಲ್ಲ. ಇನ್ನೂ ಮನೆಯಿಂದ ದೇಗುಲಕ್ಕೆ, ದೇಗುಲದಿಂದ ಮನೆಗೆ ಕಾತುರತೆಯಿಂದ ಓಡಾಡುವವರು ವಿಗ್ರಹಾರಾಧಕರು; ಏಕೆಂದರೆ, ಅವರ ಪಾಲಿಗೆ ದೇವಾಲಯದಲ್ಲಿ ಮಾತ್ರ ದೇವರಿದ್ದಾನೆ. ಆದರೆ, ನಿರಾಕಾರನಾದ ದೇವರಭಕ್ತರ ಪಾಲಿಗೆ, ಈ ವಿಶ್ವವೇ ಒಂದು ವಿಶಾಲ ದೇವಮಂದಿರವಾಗಿದೆ. ಅವರು ದೇವರನ್ನು ಹುಡುಕಿಕೊಂಡು ಯಾವ ದೇವಾಲಯಕ್ಕೂ ಹೋಗಬೇಕಾಗಿಲ್ಲ. ಇದ್ದಲ್ಲೇ ಅವರು ಭಗವಂತನನ್ನು ಸ್ಮರಿಸಬಲ್ಲರು.

**ಪ್ರಶ್ನೆ** :—ಸರಿಯೇ. ಆದರೆ–ಒಂದು ಪ್ರಶ್ನೆ ಮಾತ್ರ ಹಾಗೆಯೇ ಉಳಿದಿದೆ. ಅತಿ ಚಂಚಲಸ್ವಭಾವದ ಒಬ್ಬ ವಿದ್ಯಾರ್ಥಿ ಇದ್ದಾನೆಂದು ಭಾವಿಸಿರಿ. ಅವನಿಗೆ ಪಾಠ ಓದಲು ಕುಳಿತುಕೊಳ್ಳಲು ಬೇಕಾದಷ್ಟು ಏಕಾಗ್ರತೆಯಿಲ್ಲ. ಆದರೆ, ಸಂಗೀತದಲ್ಲಿ ಅವನಿಗೆ ಬಹಳ ಅಭಿರುಚಿಯೆಂದು ಭಾವಿಸಿರಿ. ಆಗ ಚತುರನಾದ ಉಪಾಧ್ಯಾಯನೇನು ಮಾಡುತ್ತಾನೆ? ಸಂಗೀತದ ಸಾಧನಗಳನ್ನೊದಗಿಸಿ, ಅದನ್ನು ಕೇಳಲಿಕ್ಕಾಗಿಯಾದರೂ ಆ ವಿದ್ಯಾರ್ಥಿ ಕುಳಿತುಕೊಳ್ಳುವಂತೆ ಮಾಡುತ್ತಾನೆ. ಅವನಿಗೆ ಕುಳಿತುಕೊಳ್ಳುವುದು ಅಭ್ಯಾಸವಾಗುವಂತೆ ಮಾಡುತ್ತಾನೆ. ಸಂಗೀತದ ಮೂಲಕವೇ ಅವನಿಗೆ ಪಾಠ ಹೇಳಲಾರಂಭಿಸಿ, ಕೊನೆಗೆ ಅವನನ್ನು ವಿದ್ಯಾವಂತನನ್ನಾಗಿ ಮಾಡಿಬಿಡುತ್ತಾನೆ. ಅದೇರೀತಿ, ಮೊದಲು ಸಾಕಾರದಲ್ಲಿ ಮನ ನಿಲ್ಲಿಸಲು ಅಭ್ಯಾಸಮಾಡಿದರೆ, ಕೊನೆಗೆ ನಿರಾಕಾರ ವಸ್ತುವಿನಲ್ಲಿಯೂ ಮನ ನಿಲ್ಲಿಸಲು ಸಾಧ್ಯವಾಗುತ್ತದೆ.

**ಉತ್ತರ** :—ಯುಕ್ತಿ ಚೆನ್ನಾಗಿದೆ; ಆದರೆ, ಅದರಲ್ಲಿ ಸ್ವಲ್ಪ ಒಡಕಿದೆ. ಪಾಠವೆಂಬ ವಸ್ತುವೂ, ಸಂಗೀತವೆಂಬ ವಸ್ತುವೂ ಶಬ್ದಮಯವೇ ಆದುದರಿಂದ, ಸಂಗೀತದಲ್ಲಿ ಪಾಠವನ್ನು ಸಮರಸಮಾಡಲು ಸಾಧ್ಯ. ಹಾಗಿಲ್ಲದೆ, ಸಂಗೀತಕ್ಕೆ ಸ್ವಲ್ಪವಾದರೂ ಸಾದೃಶ್ಯವಿಲ್ಲದ, ಸಂಗೀತದೊಂದಿಗೆ ಕೊಂಚವೂ ಸಮರಸಮಾಡಲು ಸಾಧ್ಯವಾಗದ ರೂಪಮಯವಾದ ಯಾವುದಾದರೂ ಒಂದು ಕಲ್ಲಿನಲ್ಲಿ ಆ ಬಾಲಕನ ಮನಸ್ಸನ್ನು ನಿಲ್ಲಿಸಲು ಆ ಉಪಾಧ್ಯಾಯನು ಯತ್ನಿಸಿದ್ದರೆ ಅವನು ಸಫಲವಾಗುತ್ತಿದ್ದನೇ? ಅದೇರೀತಿ, ನಿರಾಕಾರವಾದ ವಸ್ತುವಿನಲ್ಲಿ ಮನ ನಿಲ್ಲಿಸಲು ಕಲಿಯಬೇಕಾದರೆ, ನಿರಾಕಾರವಾದ ಯಾವುದಾದರೊಂದು ಸಾಧನವನ್ನೇ ಆಶ್ರಯಿಸಬೇಕು. ಸಾಕಾರಸಾಧನ, ನಿರಾಕಾರ ಸಿದ್ಧಿಗೆಂದೂ ಸಹಾಯಕವಾಗಲಾರದು.

**ಪ್ರಶ್ನೆ** :—ಈ ನಿಮ್ಮ ಕೊನೆಯ ಪ್ರತಿಜ್ಞೆ ಬಹಳ ದುರ್ಬಲವಾದುದು. ಶಬ್ದ ನಿರಾಕಾರವೆಂಬುದು ಸರಿಯಷ್ಟೆ; ಆದರೆ ಆ ಶಬ್ದದ ಜ್ಞಾನವನ್ನುಂಟು ಮಾಡುವ ಸಾಧನಗಳಾದ ಅಕ್ಷರಗಳು ಸಾಕಾರವಲ್ಲವೇ? ಈಗ ನಾವು 'ವ' ಎಂಬ ಶಬ್ದವನ್ನುಚ್ಚರಿಸುತ್ತೇವೆ. ಅದು ನಿರಾಕಾರ. ಆದರೆ ಆ ನಿರಾಕಾರ

ಶಬ್ದವನ್ನು 'ದ' ಎಂಬ ಅಕ್ಷರದ ಮೂಲಕ ಚಿತ್ರಿಸುತ್ತೇವೆ. ಅದು ಸಾಕಾರ. ಆ ಸಾಕಾರ 'ದ' ಲಿಪಿಯ ಮೂಲಕ ನೀವು "ದ" ಶಬ್ದದ ಜ್ಞಾನಹೊಂದುವಿದಿಲ್ಲವೇ ? ಅದೇರೀತಿ, ಸಾಕಾರಮೂರ್ತಿಯ ಮೂಲಕ ನಿರಾಕಾರ ಪರಮಾತ್ಮನ ಜ್ಞಾನವಾಗಬಹುದಲ್ಲ!

**ಉತ್ತರ** :—ಯುಕ್ತಿಯೇನೋ ಚೆನ್ನಾಗಿದೆ; ಆದರೆ, ಸ್ವಲ್ಪ ತಲೆಕೆಳಗಾಗಿದೆ ಅಷ್ಟೆ. ಇಲ್ಲಿ ನೋಡಿ: ಶಬ್ದಜ್ಞಾನವಿಲ್ಲದ ಶಿಶುವಿನೆದುರಿಗೆ ನೀವು ಬೇಕಾದಷ್ಟು ಅಕ್ಷರಗಳನ್ನು ಚಿತ್ರಿಸಿರಿ. ಅದೇನಾದರೂ ಉಚ್ಚರಿಸಬಲ್ಲದೇ ? ಅದರ ಪಾಲಿಗೆ, ಅದೆಲ್ಲಾ ಕರಿಯ ಗೆರೆ ಮಾತ್ರ. ನೀವು ಮೊದಲು ಅದಕ್ಕೆ ನಿರಾಕಾರ ಶಬ್ದದ ಜ್ಞಾನವನ್ನುಂಟು ಮಾಡಿ, ಆಮೇಲೆ, ಆ ಶಬ್ದವನ್ನು ಚಿತ್ರಿಸಲು ಅಕ್ಷರ ಒಂದು ಗುರುತೆಂದು ಹೇಳಿಕೊಟ್ಟಮೇಲೆತಾನೇ ಆ ಮಗು ಓದಲಾರಂಭಿಸುವುದು? ಸಾಕಾರ ಅಕ್ಷರ ಜ್ಞಾನವಿಲ್ಲದವನೂ ಸಹ ನಿರಾಕಾರಶಬ್ದವನ್ನು ಉಚ್ಚರಿಸಬಲ್ಲನು; ಆದರೆ ಶಬ್ದಜ್ಞಾನವಿಲ್ಲದವನು ಸಾಕಾರ ಅಕ್ಷರದಿಂದ ಯಾವ ಲಾಭವನ್ನೂ ಪಡೆಯಲಾರನು. ಅದೇರೀತಿ ಹೋಲಿಸಿ ನೋಡಿದರೆ, ನಿಮ್ಮ ಮೂರ್ತಿಪೂಜೆಯೂ ಶೀರ್ಷಾಸನ ಮಾಡಬೇಕಾಗುತ್ತದೆ! ನಿರಾಕಾರ ಬ್ರಹ್ಮನ ಜ್ಞಾನ ಮೊದಲಿದ್ದವನು, ಸಾಕಾರ ಮೂರ್ತಿಪೂಜೆ ಮಾಡಬೇಕಾಗುತ್ತದೆ. ಆ ಪರಮಾತ್ಮಜ್ಞಾನವಿಲ್ಲದ ಮಾನವನೆದುರಿಗೆ ಮೂರ್ತಿಯನ್ನಿಡುವುದೂ, ಶಬ್ದಜ್ಞಾನವಿಲ್ಲದ ಶಿಶುವಿನೆದುರಿಗೆ ವರ್ಣಮಾಲೆಯನ್ನಿಡುವುದೂ ಎರಡೂ ಒಂದೇ! ತಳಪಾಯ ಹೆಂಚಿನಜಾಗಕ್ಕೆ ಹೋಯಿತು; ಹೆಂಚು ನೆಲದಲ್ಲಿ ಕೂತುಕೊಂಡಿತು! ನಿರಾಕಾರ ಪರಮಾತ್ಮನ ಜ್ಞಾನ, ಮೂರ್ತಿಪೂಜಾ ವಿಜ್ಞಾನದ ಮೆಟ್ಟಲಾಯಿತು! ನೀವು ಮೂರ್ತಿಪೂಜೆ ಈಶ್ವರ ಸಾಕ್ಷಾತ್ಕಾರದ ಸೋಪಾನವೆಂದು ಹೇಳುತ್ತಿದ್ದುದೇನಾಯಿತು ? ನಿರಾಕಾರ ಬ್ರಹ್ಮನ ಜ್ಞಾನ ಉಳ್ಳವನು ಇನ್ನು ಮೂರ್ತಿಪೂಜೆಯನ್ನೇ ತಕ್ಕಾಶ್ರಯಿಸುವನು ?

**ಪ್ರಶ್ನೆ** :—ಹೋಗಲಿ; ಸುತ್ತಲೂ ನೀರಿದೆ ಎಂದು ಭಾವಿಸಿರಿ. ಯಾವ ದಿಕ್ಕಿಗೆ ಹೋದರೂ ನೀರು ಸಿಕ್ಕಿಯೇ ಸಿಕ್ಕುತ್ತದೆ. ಅದೇರೀತಿ, ಪರಮಾತ್ಮನೆಲ್ಲಿ

ಡೆಯೂ ಇದ್ದಾನೆ. ಯಾವ ದಾರಿಯಲ್ಲಿ ಹೋದರೂ ಸಿಕ್ಕೇಸಿಕ್ಕುತ್ತಾನೆ. ಮೂರ್ತಿಪೂಜೆಯೂ ಒಂದು ದಾರಿಯೆಂದು ಭಾವಿಸಿರಿ.

**ಉತ್ತರ** :—ಸುತ್ತಲೂ ನೀರಿದೆ; ಯಾವಕಡೆ ಹೋದರೂ ಸಿಕ್ಕುತ್ತದೆ ಎಂದುಕೊಂಡು ವಿಮಾನದಲ್ಲಿ ಕುಳಿತು ಆಕಾಶಕ್ಕೆ ಹಾರಿದರೆ, ನಿಮಗೆ ನೀರು ಸಿಕ್ಕೀತೇ ?

**ಪ್ರಶ್ನೆ** :—ಪರಮಾತ್ಮ ಸರ್ವವ್ಯಾಪಕತಾನೇ; ಮೇಲೆಯೂ ಇದ್ದಾನೆ.

**ಉತ್ತರ** :—ಆ ಸರ್ವವ್ಯಾಪಕನಾದ ಪರಮಾತ್ಮ ನೀವಿರುವಲ್ಲಿಲ್ಲವೇ ? ನಿಮ್ಮೊಳಗಿಲ್ಲವೇ ? ಮತ್ತೆ ಅವನನ್ನು ಸೇರಲು ಯಾವುದಾದರೂ ದಾರಿಹಿಡಿಯುವ ಆವಶ್ಯಕತೆ ಏನು ?

**ಪ್ರಶ್ನೆ** :—ಅದೂ ಬೇಡಿ ಸ್ವಾಮಿ. ನಿಮ್ಮಂತಹ ವಿದ್ವಾಂಸರಿಗೆ ಇದೆಲ್ಲಾ ಅರ್ಥವಾಗುತ್ತದೆ. ಲೋಕದಲ್ಲಿ ಮೂಢಾತ್ಮರೇ ಜಾಸ್ತಿಯಿದ್ದಾರೆ. ಅವರ ಸಲುವಾಗಿ ಮೂರ್ತಿಪೂಜೆ ಬೇಕೇ ಬೇಕು. ಏಕೆಂದರೆ, ಅವರ ಮಂದಬುದ್ಧಿಯಲ್ಲಿ ನಿರಾಕಾರ ಪರಮಾತ್ಮನ ವಿಷಯ ತೂರವುದೇ ಇಲ್ಲ.

**ಉತ್ತರ** :—ಇದಕ್ಕಿಂತ ಅನರ್ಥಕರವಾದ ಕಥನ ಬೇರೊಂದಿರಲಿಕ್ಕಿಲ್ಲ. ಮೂರ್ತಿಪೂಜೆ ಯಾರಿಗೂ ಬೇಕಾಗಿಲ್ಲವೆಂದು ನಾವಿದುವರೆಗೆ ಅನೇಕಬಾರಿ ಸಾಧಿಸಿದ್ದೇವೆ. ಮೂರ್ತಿಪೂಜೆಯಿಂದ ವಿದ್ವಾಂಸರಿಗಿಂತ ಹೆಚ್ಚು ಅಪಾಯ ಮೂರ್ಖರಿಗುಂಟೆಂಬುದನ್ನು ನಾವೆಂದಿಗೂ ಮರೆಯುವಂತಿಲ್ಲ. ಏಕೆಂದರೆ, ಜ್ಞಾನಿಗಳು ಕಲಾದೃಷ್ಟಿಯಿಂದ ಮೂರ್ತಿಗಳನ್ನು ಸಿಂಗರಿಸಬಲ್ಲರು; ಅವು ದೇವರಲ್ಲ; ಬರೇ ಜಡಧಾತು ಖಂಡಗಳೆಂಬ ಪರಿಜ್ಞಾನ ಅವರಿಗಿರುವುದರಿಂದ, ಅವರ ಆತ್ಮಗಳೆಂದೂ ಮೋಸಹೋಗುವುದಿಲ್ಲ. ಆದರೆ, ಮೂರ್ಖರಿಗೆ ನೀವು ಮೂರ್ತಿಪೂಜೆಯನ್ನೇನಾದರೂ ಕಲ್ಪಿಸಿಕೊಟ್ಟಲ್ಲಿ, ಅವರು ಆ ಕಲ್ಲುಮಣ್ಣುಗಳನ್ನೇ ದೇವರೆಂದು ನಂಬಿ, ನಿಜವಾದ ಭಗವಜ್ಜ್ಞಾನದ ಹಂಬಲಳಿದು, ಘೋರ ಅಜ್ಞಾನದ ವಿಕಟಾಂಧಕಾರ ಕೂಪದಲ್ಲಿ ಬಿದ್ದು, ಆತ್ಮಿಕ ಜೀವನವನ್ನೇ ನಾಶ ಮಾಡಿಕೊಂಡುಬಿಡುತ್ತಾರೆ.

**ಪ್ರಶ್ನೆ** :—ನೀವು ಹೇಳುವ ಮಾತೇನೋ ಸರಿಯಾಗಿಯೇ ಕಾಣುತ್ತದೆ. ಆದರೆ, ಬಾಹ್ಯಪೂಜೆ ಬೇಕಾಗಿಯೇ ಇಲ್ಲವೆಂದು ನೀವೇಕೆ ಹೇಳುತ್ತೀರಿ? ಮಗುವು, ತಂದೆಯೇ ಕೊಟ್ಟಕಾಸಿಗೆ ಪೆಪ್ಪರಮೆಂಟನ್ನು ತಂದು, ತಂದೆಯ ಬಾಯಿಗೂ ಒಂದು ಪೆಪ್ಪರಮೆಂಟನ್ನು ಹಾಕುತ್ತದೆ. ಆ ಕ್ರಿಯೆಯಿಂದ ತಾನೂ ನಲಿಯುತ್ತದೆ. ತಂದೆಗೂ ಆನಂದವಾಗುತ್ತದೆ; ಆದರೆ, ಇದರರ್ಥ, ತಂದೆಗೆ ಪೆಪ್ಪರಮೆಂಟು ಗತಿಯಿಲ್ಲವೆಂದಲ್ಲ. ಅದೇರೀತಿ, ಭಕ್ತನು ಭಗವಂತನೇ ಇತ್ತ ಹಣ್ಣು-ಕಾಯಿಗಳನ್ನು, ಭಗವಂತನಿಗೇ ಅರ್ಪಿಸಿ, ತಾನು ಆತ್ಮತೃಪ್ತಿ ಹೊಂದುತ್ತಾನೆ. ಇದರಲ್ಲಿ ಭಗವಂತನಿಗೇನೂ ಅವಮಾನವಿಲ್ಲ ಈ ನಿವೇದನೆಯ ಒಂದು ಕ್ರಮವೇ ಮೂರ್ತಿಪೂಜೆ.

**ಉತ್ತರ** :—ಮಗು, ಪೆಪ್ಪರಮೆಂಟನ್ನು ತನ್ನ ತಂದೆಯ ಬಾಯಿಗೇ ಹಾಕುವಂತೆ. ಮೂರ್ತಿಪೂಜಕರು ನೈವೇದ್ಯಗಳನ್ನು ಸಾಕ್ಷಾತ್ ಪರಮಾತ್ಮನಿಗೇ ಸಮರ್ಪಿಸುತ್ತಾರೇನು? ಅಲ್ಲದೆ, ಮಗುವಿತ್ತ ಪೆಪ್ಪರಮೆಂಟನ್ನು ತಂದೆ ಸ್ವೀಕರಿಸುವುದರಿಂದತಾನೇ ಮಗುವಿಗೆ ಆತ್ಮತೃಪ್ತಿ? ಹಾಗಿಲ್ಲದೆ, ತಂದೆಯೂ ದೇವಾಲಯಗಳಲ್ಲಿನ ವಿಗ್ರಹದಂತೆ ನಿಶ್ಚಲನಾಗಿ ಕುಳಿತಿದ್ದರೆ ಮಗುವಿಗೆ ಆನಂದವಾಗುತ್ತಿತ್ತೇ?

**ಪ್ರಶ್ನೆ** :—ತಂದೆ ಸ್ವೀಕರಿಸದೆಯೂ ಇರಬಹುದು; ಆದರೆ, ತನ್ನ ಮಗು ತನ್ನನ್ನಿಷ್ಟು ಪ್ರೀತಿಸುವುದಲ್ಲ ಎಂದು ಹರ್ಷಿತ ನಾತು ಆಗುವನಲ್ಲ! ಅದೇರೀತಿ, ಭಕ್ತನಿತ್ತ ಕಾಣಿಕೆಯನ್ನು ಭಗವಂತನು ಪ್ರತ್ಯಕ್ಷವಾಗಿ ಸ್ವೀಕರಿಸದಿದ್ದರೂ ಸಹ, "ಆಹಾ! ನನ್ನ ಭಕ್ತನ ಭಕ್ತಿ ಎಂತಹುದು!" ಎಂದು ಪ್ರಸನ್ನನಾಗುವನು.

**ಉತ್ತರ** :—ಅಲ್ಪಜ್ಞನಾದ ತಂದೆ, ಮಗುವಿನ ಅಂತರಂಗದ ಭಾವನೆಯ ಅಭಿವ್ಯಕ್ತಿಯಿಂದ ಹರ್ಷಿತನಾಗುವುದು ಸ್ವಾಭಾವಿಕ, ಏಕೆಂದರೆ, ಮಗುವಿನ ಅಂತರಂಗವನ್ನರಿಯುವ ಶಕ್ತಿ ಆತನಿಗಿಲ್ಲ. ಆದರೆ, ಸರ್ವಜ್ಞನೂ, ಸರ್ವಾಂತರ್ಯಾಮಿಯೂ ಆದ ಭಗವಂತನು, ಭಕ್ತನ ಹೃದ್ಗತವನ್ನು ಬಾಹ್ಯನಾಟಕವಿಲ್ಲದೆ ಅರಿಯಲಾರನೇ?

ಪ್ರಶ್ನೆ :—ಭಗವಂತನು ಭಕ್ತನ ನೈವೇದ್ಯವನ್ನು ಸ್ವೀಕರಿಸುವುದಿಲ್ಲವೆಂದು ನೀವೇಕೆ ತರ್ಕಿಸುತ್ತೀರಿ? ಅಪ್ರತ್ಯಕ್ಷವಾಗಿ ಭಗವಂತನದನ್ನು ಸ್ವೀಕರಿಸಿ, ಭಕ್ತನ ಸಲುವಾಗಿ ಮತ್ತೆ ಅದೇ ನೈವೇದ್ಯವನ್ನು ಪ್ರಸಾದದ ಸಲುವಾಗಿ ನಿರ್ಮಿಸುತ್ತಾನೆಂದು ಏಕೆ ಹೇಳುತ್ತಾನಿಲ್ಲ?

ಉತ್ತರ :—ಪರಮಾತ್ಮನು ಏಂಜಲ ಏನನ್ನೂ ತಿನ್ನುವುದಿಲ್ಲವೆಂದು ನಾವು ಹೇಳುತ್ತೇವಲ್ಲ! ನಿತ್ಯತೃಪ್ತನೂ, ಪ್ರಾಪ್ತಸರ್ವಸ್ವನೂ ಆದ ಪರಮಾತ್ಮನಿಗೆ ಪ್ರಾಪ್ತವ್ಯವಾದ ಅಪ್ರಾಪ್ತ ವಸ್ತುವಾವುದಿದೆ ?

ಪ್ರಶ್ನೆ :—ಹೋಗಲಿ. ನೀವು ಹೇಗೂ ಮೂರ್ತಿಪೂಜೆಯನ್ನೊಪ್ಪುವುದಿಲ್ಲ. ಹಾಗಾದರೆ, ಭಗವಂತನಲ್ಲಿ ಚಿತ್ತ ನಿಲ್ಲಿಸಲು ಸಹಾಯಕವಾಗುವ ಬೇರಾವ ಸಾಧನ ನಿಮ್ಮ ಬಳಿಯಿದೆ?

**ಉತ್ತರ** :—ಒಳ್ಳೆಯ ಪ್ರಶ್ನೆಯೇ ಸರಿ. ಪರಮಾತ್ಮನು ನಿರಾಕಾರನಾದುದರಿಂದ, ನಿರಾಕಾರವಾದ ಶಬ್ದದಲ್ಲೇ ಮೊದಲು ಚಿತ್ತ ನಿಲ್ಲಿಸಲು ಅಭ್ಯಾಸ ಮಾಡಬೇಕು. ಎಂದರೆ, ಪರಮಾತ್ಮನ ಗುಣಕರ್ಮಸ್ವಭಾವಪ್ರಕಾಶಕವಾದ ದಿವ್ಯವಾದ ನಾಮಗಳನ್ನು ಮನನಪೂರ್ವಕವಾಗಿ ಉಚ್ಚರಿಸಬೇಕು. ಓಂಕಾರವನ್ನು ನಿರಂತರವಾಗಿ ಜಪಿಸಬೇಕು. ಧ್ಯಾನಮಾಡಲು ಕೂಡುವಾಗ, ಮೌನವಾಗಿರಬೇಕೆಂಬ ಇಚ್ಛೆಯಿದ್ದರೆ-ಉಪಾಸನೆಯು ಜಗದೀಶ್ವರನ ಗುಣಗಣ ಪ್ರಕಾಶಕವಾದ ಮತ್ತು ಮಧುರ ರಾಗಸಂಯೋಜಿತವಾದ ಯಾವುದಾದರೂ ಒಂದು ಗೀತೆಯನ್ನು ಶ್ರವಣಮಾಡುತ್ತಾ ಕುಳಿತುಕೊಳ್ಳಬೇಕು. ರೂಪದಲ್ಲಿ ಮನಸ್ಸು ಸ್ಥಿರವಾಗುವುದಕ್ಕಿಂತ ಶಬ್ದದಲ್ಲಿ ಸ್ಥಿರವಾಗುವುದು ಬಹಳ ಸುಲಭ. ಅದಲ್ಲದೆ, ಶಬ್ದವು ಸಂಗೀತಮಯವಾಗಿದ್ದರಂತೂ ಸಾಕಾರ ಮೂರ್ತಿಯ ಧ್ಯಾನ ಅತಿ ನೀರಸವೆಂಬುದು ಸಾಧಕನಿಗೆ ತಾನಾಗಿಯೇ ವ್ಯಕ್ತವಾಗುತ್ತದೆ.

ಪ್ರಶ್ನೆ :—ಸಾಕಾರದ ಮೂಲಕ ನಿರಾಕಾರವಸ್ತು ಪ್ರಾಪ್ತವಾಗಬಹುದೆಂದೇ ನಮಗೆ ತೋರುತ್ತದೆ. ಲಕ್ಷ್ಯವೇಧದ ಅಭ್ಯಾಸವನ್ನು ಮಾಡುವವರನ್ನು

ನೋಡಿರಿ. ಮೊದ ಮೊದಲು ಅತಿ ಸ್ಥೂಲವಾದ ವಸ್ತುಗಳನ್ನು ಗುರಿಯಾಗಿಟ್ಟುಕೊಳ್ಳುತ್ತಾರೆ; ಬರುಬರುತ್ತಾ ಅದನ್ನು ಸೂಕ್ಷ್ಮಗೊಳಿಸುತ್ತಾ, ಕಡೆಗೆ ಒಂದು ಬಿಂದುಮಾತ್ರವನ್ನಾದರೂ ಭೇದಿಸಬಲ್ಲಷ್ಟು ಸಮರ್ಥರಾಗುತ್ತಾರೆ. ದೃಷ್ಟಿಯ ಏಕಾಗ್ರತೆಯಂತೆಯೇ ಚಿತ್ತದ ಏಕಾಗ್ರತೆಯೂ ಸ್ಥೂಲದಿಂದ ಸೂಕ್ಷ್ಮಕ್ಕೂ, ಸೂಕ್ಷ್ಮದ ಮುಂದಿರುವ ನಿರಾಕಾರ ಲಕ್ಷ್ಯಕ್ಕೂ ಹೊಂದಬಲ್ಲದು.

**ಉತ್ತರ**:-ಲಕ್ಷ್ಯವೇಧದಲ್ಲಿನ ಸೂಕ್ಷ್ಮತ್ವಕ್ಕೂ, ಪರಮಾತ್ಮನ ಸೂಕ್ಷ್ಮತ್ವಕ್ಕೂ ಅಜಗಜಾಂತರ ಭೇದವಿದೆ. ಅದೆಷ್ಟೇ ಸೂಕ್ಷ್ಮವಾಗಲೀ, ಅದು ಸಾಕಾರವೇ ಸರಿ. ನಿರಾಕಾರ ಲಕ್ಷ್ಯಕ್ಕೆ ಈ ದೃಷ್ಟಾಂತ ಹೊಂದಲಾರದು. ಚಿತ್ತವಾದರೋ ಸಾಕಾರವಸ್ತುವನ್ನು ಗ್ರಹಿಸಿದ ಮೇಲೂ ಸಹ, ನಿರಾಕಾರದ ವಿಷಯದಲ್ಲಿ ಅನಭ್ಯಸ್ತವಾಗಿಯೇ ಉಳಿದು ಹೋಗುವುದೆಂಬುವುದು ಸ್ಪಷ್ಟವಾಗಿಯೇ ಇದೆ. ಕೇವಲ ಏಕದೇಶೀಯವಾದ ವೇಧನೀಯ ಸಾಕಾರಬಿಂದುವಿನ ಸೂಕ್ಷ್ಮತ್ವವು. ಸಾಕಾರದ ದೃಷ್ಟಿಯಿಂದ ದೃಷ್ಟ್ಯೈಕಾಗ್ರತೆಯ ಸಾಧನವಾಗಲು, ವೇಧನೀಯ ಮತ್ತು ವೇಧಕರ ನಡುವೆಯಿರುವ ಸ್ಥಾನದ ಅಂತರ, ವೇಧನೀಯದ ನಿರ್ದಿಷ್ಟಸ್ಥಾನ ವರ್ತಿತ್ವ ಮೊದಲಾದ ಹಲವು ಕಾರಣಗಳಿವೆ. ಆದರೆ, ಸರ್ವತ್ರ ವಿದ್ಯಮಾನಪರಮಾತ್ಮನ ನಿರಾಕಾರತ್ವ ಹಾಗೂ ಸೂಕ್ಷ್ಮತ್ವಗಳು ಈ ಯಾವ ಕಾರಣಗಳಿಗೂ ಅವಕಾಶವೀಯಲಾರವು. ಸಾಕಾರದ ಅಣುತ್ವವು, ನಿರಾಕಾರದ ಸೂಕ್ಷ್ಮತ್ವಕ್ಕೆ ಯಾವ ದೃಷ್ಟಿಯಿಂದಲೂ ಸದೃಶವೆನಿಸಲಾರದು.

**ಪ್ರಶ್ನೆ** :-ಚಂಚಲವಾದ ಚಿತ್ತವನ್ನು, ವಿಶಾಲ ವಿಚಾರಕ್ಷೇತ್ರದಿಂದ ಎಳೆತಂದು, ಎಲ್ಲಿಯಾದರೊಂದು ಕಡೆ ಸ್ಥಿರವಾಗಿನಿಲ್ಲಲೆಂಬ ಭಾವನೆಯಿಂದ, ಬಂಧಿಸಲಿಕ್ಕಾಗಿ ಮೂರ್ತಿಗಳ ಆಶ್ರಯವನ್ನೇಕೆ ಪಡೆಯಬಾರದು?

ಉತ್ತರ :—ಹಿಂದೆಯೇ ವ್ಯಾಪ್ಯವಸ್ತುವಿನ ಧ್ಯಾನ, ವ್ಯಾಪಕತತ್ವಪ್ರಾಪ್ತಿಯ ಸಾಧನವಾಗಲಾರದೆಂದು ಹೇಳಿದ್ದೇವೆ. ಚಿತ್ತವನ್ನು ಬಂಧಿಸಲಿಕ್ಕಾಗಿ

ಮೂರ್ತಿಧ್ಯಾನ ಮಾಡುವುದು ಯಾವರೀತಿಯಿಂದಲೂ ಅಭೀಷ್ಟಸಿದ್ಧಿಗೆ ಸಹಾಯಕವಾಗಲಾರದೆಂದೂ ಸಹ ವಿಸ್ತಾರವಾಗಿ ಹೇಳಿದ್ದೇವೆ. ಎರಡನೆಯದಾಗಿ, ಮನಃಸ್ಥೈರ್ಯಕ್ಕಾಗಿ ಯಾವುದಾದರೊಂದು ಸಾಕಾರವಸ್ತು ಬೇಕೆಂಬುದು ಮಾತ್ರ ಉದ್ದೇಶ್ಯವಾಗಿದ್ದಲ್ಲಿ, ಆ ಮೂರ್ತಿಗಳು ಅಜ್ಞಾನಾಂಧಕಾರವನ್ನು ಯಥೇಚ್ಛವಾಗಿ ಪ್ರಸರಿಸುವ ಪುರಾಣೋಕ್ತ ದೇವಿದೇವತೆಯರ ವಿಗ್ರಹಗಳೇ ಏಕಾಗಿರಬೇಕೆಂಬ ಪ್ರಶ್ನೆ ಬೇರೆ ಏಳುತ್ತದೆ. ಮತ್ತೆ ಆರ್ಯಾವರ್ತದಲ್ಲಿ, ಸಹಸ್ರಾರು ವರ್ಷಗಳಿಂದ ಕೋಟ್ಯಂತರ ವಿಗ್ರಹಾರಾಧಕರು ಜನ್ಮವೆತ್ತಿ, ಪೂಜೆ ಸಲ್ಲಿಸಿ, ಹೊರಟು ಹೋಗಿದ್ದಾರೆ, ಆದರೆ, ಅವರಲ್ಲೆಷ್ಟು ಮಂದಿಯ ಚಿತ್ತ, ದೇವಮೂರ್ತಿಗಳಲ್ಲಿ ಎರಡು ನಿಮಿಷವಾದರೂ ಸ್ಥಿರವಾಗಿ ನಿಂತು, ನಿರಾಕಾರ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಮಾರ್ಗವಾಯಿತೆಂಬ ಪ್ರಶ್ನೆಗೆ ಉತ್ತರ ಸಿಕ್ಕುವಂತಿಲ್ಲ. ಎರಡನೆಯದಾಗಿ, ಮೂರ್ತಿ ಮನ ನಿಲ್ಲಿಸುವ ಒಂದು ಸಾಧನವೆಂಬ ನಿಮ್ಮ ವಾದ ಸತ್ಯವೇ ಆಗಿದ್ದಲ್ಲಿ, ಆರಾರಡಿ–ಎಂಟೆಂಟಡಿ ಎತ್ತರದ, ವಿವಿಧಾಕಾರದ ಪುರಾಣೋಕ್ತ ದೇವಿದೇವತೆಯರ ಬೊಂಬೆಗಳ ರಚನೆಗೆ ಬದಲು, ಚಿಕ್ಕಚಿಕ್ಕದಾದ ಗುಲಗಂಜಿ ಗಾತ್ರದ ಮೂರ್ತಿಗಳ ರಚನೆಯಾಗಬೇಕಾಗಿತ್ತು. ಬಾಹ್ಯಪೂಜಾ ವಿಧಾಯಕವಾದ ಆಗಮಶಾಸ್ತ್ರಗಳ ನಿರ್ಮಾಣ ಅನಾವಶ್ಯಕವಾಗಿತ್ತು.

**ಪ್ರಶ್ನೆ** :—ಅಲ್ಲ ಸ್ವಾಮೀ ! ಮೂಢರು ಸೇರಬೇಕಾದರೆ, ಏನಾದರೊಂದು ಆಕರ್ಷಣೆ ಬೇಕಷ್ಟೆ ? ಗಂಟೆ–ಜಾಗಟೆ, ಧೂಪ–ದೀಪ, ಅರ್ಚನೆ–ಆರತಿ, ಅಪಾರ ಶೃಂಗಾರಗಳ ಆಡಂಬರ, ಮೂಢರನ್ನು ದೇಗುಲಕ್ಕೆ ಸುಲಭವಾಗಿ ಎಳೆ ತರುತ್ತದೆ, ಬಾಹ್ಯ ಆಕರ್ಷಣವಿಲ್ಲದ ಸತ್ಯ ಹೃದಯಕ್ಕೆ ತಟ್ಟುವುದು ಸುಲಭವಲ್ಲ.

ಉತ್ತರ :—ಸತ್ಯಕ್ಕಿಂತ ದೊಡ್ಡದಾದ ಆಕರ್ಷಣ ಬೇರಾವುದೂ ಇಲ್ಲವೆಂಬ ತತ್ವವೇ ನಮಗೆ ಮಾನ್ಯ. ಆದರೆ, ಮೂಢರನ್ನು ಆಕರ್ಷಿಸಲು ಆಡಂಬರ ಬೇಕಾಗುತ್ತದೆಂಬ ಮಾತನ್ನು ನಾವೂ ಒಪ್ಪುತ್ತೇವೆ. ಆದರೆ, ಆ ಆಡಂಬರ, ಮೊದಲೇ ಮೂಢರಾದವರನ್ನು ಮತ್ತೂ ಮೂಢರನ್ನಾಗಿ ಮಾಡುವ

ಆಡಂಬರವಾಗಿರಬಾರದು. ಸಚ್ಚಿದಾನಂದ ಸ್ವರೂಪನಾದ ನಿರಾಕಾರೇಶ್ವರನ ಜ್ಞಾನವಿಲ್ಲದ ಮೌಢ್ಯವೊಂದಲೇ ಅವರನ್ನು ಕಿತ್ತು ತಿನ್ನುತ್ತಿರುವಾಗ, ಜಡ ವಿಗ್ರಹವೇ ಚೇತನಸ್ವರೂಪವೆಂದವರಿಗೆ ಬೋಧಿಸಿ, ಭಗವಂತನನ್ನು ಜಡ ವಸ್ತುವೆಂದು ಭಾವಿಸಿ, ಆತ್ಮದ್ರೋಹ ಮಾಡಿಕೊಳ್ಳುವ ಮೌಢ್ಯವನ್ನು ಬೇರೆ ಉಂಟುಮಾಡುವುದು ಯಾವ ನ್ಯಾಯ? ಆಕರ್ಷಣೆ ಬೇಕೆಂದಾದರೆ, ಕಲಾವೃಷ್ಟಿಯಿಂದ ಸುಂದರವಾದ ಪ್ರಾರ್ಥನಾಮಂದಿರವನ್ನು ರಚಿಸಿ, ಸುಂದರವಾಗಿ ಸಿಂಗರಿಸಿರಿ. ಸುಗಂಧದ್ರವ್ಯಗಳಿಂದ ಅಲ್ಲಿನ ವಾಯುಮಂಡಲ ಘುಮಘುಮಿಸುವಂತೆ ಮಾಡಿರಿ. ಭಗವತ್ಪ್ರೇಮಸಾಗರದಲ್ಲಿ ಮಗ್ನರಾಗುವಂತೆ ಮಾಡುವ ಮಧುರ ಭಜನೆಗಳನ್ನೂ, ಆಧ್ಯಾತ್ಮಿಕ ಉಪದೇಶಗಳನ್ನೂ ಏರ್ಪಡಿಸಿರಿ. ಇದನ್ನೆಲ್ಲಾ ಬಿಟ್ಟು, ತನಗಿಂತ ಕೀಳಾದ ಪ್ರಕೃತಿತತ್ವದಿಂದ ರಚಿತವಾದ ಜಡಖಂಡವನ್ನು ತನಗಿಂತ ಉತ್ತಮನಾದ ಪರಮಾತ್ಮನೆಂದು ಸಂಬೋಧಿಸುವ ಅವಾಂಛಿತ ಕಾರ್ಯಕ್ರಮಕ್ಕೆ ಮೂಢರನ್ನು ಪ್ರೇರಿಸುವುದು ಯಾವ ಧರ್ಮ?

**ಪ್ರಶ್ನೆ**:—ಇಲ್ಲಿ ನೋಡಿ; ಮೋಟಾರಿನ ಬೇರೆ ಬೇರೆ ಅಂಗಗಳು ಕಬ್ಬಿಣದ ತುಂಡುಗಳೇ ಸರಿ. ಯಾವುದರಲ್ಲಿಯೂ ಸ್ವತಃ ಚಲಿಸುವ ಶಕ್ತಿಯಿಲ್ಲ. ಹಾಗಿದ್ದರೂ ಅವುಗಳಿಂದಲೇ ಮೋಟಾರನ್ನು ನಿರ್ಮಿಸಿ, ಪೆಟ್ರೋಲ್ ತುಂಬಿ, ಸಾರಥಿ ನಡೆಸಹತ್ತಿದನೆಂದರೆ ವಾಯುವೇಗದಿಂದ ಓಡಹತ್ತುತ್ತದೆ. ಅದೇರೀತಿ, ಬೊಂಬೆ ಜಡವೇ ಸರಿ; ಆದರೆ ಭಕ್ತಿಯೆಂಬ ಪೆಟ್ರೋಲನ್ನು ತುಂಬಿ, ಭಕ್ತನೆಂಬ ಸಾರಥಿ ಸಾಧನೆಗೆ ನಿಂತರೆ ಜಡವಿಗ್ರಹವೇ ಚೇತನ ಪರಮಾತ್ಮನಾಗುತ್ತದೆ.

ಉತ್ತರ:—ಈ ನಿಮ್ಮ ದೃಷ್ಟಾಂತದಲ್ಲಿನ ಮೋಟಾರು ಅನೇಕ ಭಿನ್ನ ಭಿನ್ನ ಅಂಗಗಳಿಂದಾದ ಒಂದು ಸಂಯುಕ್ತವಸ್ತು. ಅದೇರೀತಿ ಪರಮಾತ್ಮನು, ಜಡವಿಗ್ರಹ; ಭಕ್ತಿಯೆಂಬ ಪೆಟ್ರೋಲ್ ಭಕ್ತನೆಂಬ ಡ್ರೈವರ್, ಇವರುಗಳ ಸಂಯೋಗದಿಂದ ಚೇತನಪಡೆದ ಒಂದು ಸಂಯುಕ್ತವಸ್ತುವೆಂಬ ಮಾತು ಇನ್ನೂ ಸಿದ್ಧವಾಗಬೇಕಾಗಿದೆ, ಏಕೆಂದರೆ–ಭಾರತ ವರ್ಷದ ೩೫ ಕೋಟಿ

ಜನ ಹಿಂದೂಗಳು ಸಾವಿರಾರು ವರ್ಷಗಳಿಂದ ಸುರಿದು ಸುರಿದು ತಮ್ಮ ಪೆಟ್ರೋಲನ್ನೆಲ್ಲಾ ಖರ್ಚು ಮಾಡಿಕೊಂಡರೂ ಸಹ ಒಂದೇ ಒಂದು ಜಡ ಮೂರ್ತಿಯೂ ಚೇತನಪರಮಾತ್ಮನಾಗಲಿಲ್ಲ!

**ಪ್ರಶ್ನೆ** :—ನೀವು ಎಲ್ಲವನ್ನೂ ಬಾಹ್ಯದೃಷ್ಟಿಯಿಂದಲೇ ಅವಲೋಕಿಸುತ್ತೀರಿ. ಅಂತರ್ದೃಷ್ಟಿಯನ್ನೇಕೆ ಉಪಯೋಗಿಸಬಾರದು?

ಉತ್ತರ :—ನೀವು ಅಂತರ್ದೃಷ್ಟಿಗೆ ವಿಷಯವಾಗಬಲ್ಲ ದೃಷ್ಟಾಂತವನ್ನು ಕೊಟ್ಟರೆ ತಾನೇ ನಾವು ಅಂತರ್ದೃಷ್ಟಿಯನ್ನುಪಯೋಗಿಸಲು ಅವಕಾಶ ಸಿಕ್ಕುವುದು? ಪೆಟ್ರೋಲಿನಿಂದ ಮೋಟರೋಡುವುದನ್ನು, ಭಕ್ತಿಯಿಂದ ಬಂಡೆಯೂ ಭಗವಂತನಾಗುವ ವಿಷಯಕ್ಕೆ ನೀವು ಹೋಲಿಸಿದರೆ—ನಾವಿನ್ನೇನು ಮಾಡೋಣ?

**ಪ್ರಶ್ನೆ** :—ಭಗವಾನ್ ರಾಮಕೃಷ್ಣ ಪರಮಹಂಸ ದೇವರು ಕಾಳೀಮಾತೆಯ ವಿಗ್ರಹಾರಾಧನೆಯಿಂದ ಆ ಮಹಾ ಮಾತೆಯ ಸಾಕ್ಷಾತ್ಕಾರ ಮಾಡಿಕೊಂಡು ಮುಕ್ತರಾಗಿರುವ ಉದಾಹರಣೆ ನಿಮ್ಮ ಕಣ್ಣೆದುರಿಗಿರುವಾಗ ನೀವು ಮೂರ್ತಿ ಪೂಜೆ ನಿಷಿದ್ಧವೆಂದೇಕೆ ಹೇಳುತ್ತೀರಿ?

ಉತ್ತರ:—ಪ್ರಾತಃಸ್ಮರಣೀಯ ಪೂಜ್ಯಪಾದ ಮಹರ್ಷಿ ದಯಾನಂದ ಸರಸ್ವತಿಗಳು, ಮೊದಲು ವಿಗ್ರಹಾರಾಧಕರೇ ಆಗಿದ್ದು, ಆಮೇಲೆ ವಿಗ್ರಹಾರಾಧನೆ ಅಜ್ಞಾನಮೂಲವೆಂಬ ತತ್ವವನ್ನು ಸಾಕ್ಷಾತ್ಕರಿಸಿಕೊಂಡು, ಚೇತನ ಬ್ರಹ್ಮೋಪಾಸನೆಯಿಂದ ಮುಕ್ತರಾದ ಉದಾಹರಣೆ ನಿಮ್ಮ ಕಣ್ಣೆದುರಿಗಿರುವಾಗ, ಮೂರ್ತಿಪೂಜೆ ನಿಷಿದ್ಧವಲ್ಲವೆಂದು ನೀವೇಕೆ ಹೇಳುತ್ತೀರಿ?

**ಪ್ರಶ್ನೆ** :—ಹಾಗಾದರೆ ದೈವೀಪುರುಷರಾದ ರಾಮಕೃಷ್ಣ ಪರಮಹಂಸರು ಮಿಥ್ಯಾಭಾಷಿಗಳೇನು?

ಉತ್ತರ :—ದೈವೀ ಪುರುಷರಾದ ದಯಾನಂದಸರಸ್ವತಿಗಳು ಮಿಥ್ಯಾಭಾಷಿಗಳೇನು?

ಪ್ರಶ್ನೆ:-ನೀವು ನಮ್ಮ ಪ್ರಶ್ನೆಗಳಿಗೆ ನೇರವಾದ ಉತ್ತರವನ್ನೇಕೆ ಕೊಡುವುದಿಲ್ಲ?

ಉತ್ತರ :—ವ್ಯಕ್ತಿ ಸಂಬಂಧವಾದ ಈ ಪ್ರಶ್ನೆಗಳಿಗೆ ಇಂತಹ ಉತ್ತರವನ್ನೇ ಕೊಡಬೇಕಾಗುತ್ತದೆ. ಈ ಅವಾಂತರ ತಪ್ಪಲೆಂದೇ ನಾವಿದುವರೆಗೆ ಯಾವ ವ್ಯಕ್ತಿಯ ಹೆಸರನ್ನೂ ಎತ್ತಲಿಲ್ಲ. ಆದರೆ-ನೀವೇ ನಮ್ಮನ್ನು ಈ ಗೊಂದ ಲಕ್ಕೆಸಿಕ್ಕಿಸಿದಿರಿ.

**ಪ್ರಶ್ನೆ** :—ಹೋಗಲಿ. ಇಬ್ಬರಲ್ಲಿ ಯಾರೂ ಮಿಥ್ಯಾವಾದಿಗಳಲ್ಲ. ಇಬ್ಬರ ಹೇಳಿಕೆಯೂ ಮಾನ್ಯ. ಮೂರ್ತಿಪೂಜೆ ಮಾಡಿದರೆ ಮಾಡಬಹುದು; ಬಿಟ್ಟರೆ ಬಿಡಬಹುದು.

ಉತ್ತರ :—ಭಿನ್ನ ಭಿನ್ನ ತತ್ವಗಳಲ್ಲಿ, ಏಕಕಾಲದಲ್ಲಿ ವಿಕಲ್ಪಕ್ಕೆ ಅವಕಾಶವಿದೆ; ಆದರೆ ಏಕತತ್ವದಲ್ಲಿ, ಏಕಕಾಲದಲ್ಲಿ ವಿಕಲ್ಪವೆಂದಿಗೂ ಸಿದ್ಧಿಸಲಾರದು. ಒಂದು ಹಳದಿಯಬಟ್ಟೆ, ಒಂದು ಬಿಳಿಯ ಬಟ್ಟೆ-ಹೀಗೆ ಎರಡಿದ್ದರೆ "ಇದನ್ನಾದರೂ ತೆಗೆದುಕೊಳ್ಳಿ, ಅದನ್ನಾದರೂ ತೆಗೆದುಕೊಳ್ಳಿ"ಎನ್ನಬಹುದು. ಒಂದೇ ಒಂದು ವಸ್ತುವಿರುವಾಗ ಅಲ್ಲಿ ವಿಕಲ್ಪವಿಲ್ಲ. ಒಂದೇ ಬಟ್ಟೆಯಿರುವಾಗ : "ಈ ಬಟ್ಟೆಯನ್ನು ತೆಗೆದುಕೊಂಡರೆ ಒಳ್ಳೆಯದೂ ಹೌದು ಕೆಟ್ಟದು ಹೌದು" ಎಂಬ ಮಾತಿಗೆ ಏನೂ ಅರ್ಥವಿರಲಾರದು. ನಿಜ. ಒಂದೇ ವಸ್ತುವಿದ್ದಾಗಲೂ ಸಹ "ಬೇಸಿಗೆಗೆ ಅದು ಕೆಟ್ಟದು; ಚಳಿಗಾಲಕ್ಕೆ ಒಳ್ಳೆಯದು" ಎಂದು ಕಾಲ ಭೇದದಿಂದ ವಿಕಲ್ಪಮಾಡಬಹುದು. ಅದೇರೀತಿ, "ಮೂರ್ತಿಪೂಜೆ" ಒಂದೇ ಒಂದು ತತ್ವ. ಏಕಕಾಲದಲ್ಲಿ ಅದು ಒಳ್ಳೆಯದು ಆಗಿ, ಕೆಟ್ಟದೂ ಆಗಿರ ಲಾರದು. ಅದು ಒಳ್ಳೆಯದಾಗಿದ್ದರೆ ಒಳ್ಳೆಯದೇ ಆಗಿರುವುದು; ಕೆಟ್ಟದಾಗಿದ್ದರೆ ಕೆಟ್ಟದೇ ಆಗಿರುವುದು. ಕಾಲಭೇದದಿಂದ "ಅಜ್ಞಾನಾವಸ್ಥೆಯಲ್ಲಿ ರುವವರಿಗೆ ಮೂರ್ತಿಪೂಜೆ ಒಳ್ಳೆಯದು; ಜ್ಞಾನಾವಸ್ಥೆಯಲ್ಲಿ ಅದು ಒಳ್ಳೆಯದಲ್ಲ" ಎಂದು ತರ್ಕಿಸುವುದಾದಲ್ಲಿ, "ಅಜ್ಞಾನಾವಸ್ಥೆಯಲ್ಲಿ ಮೂರ್ತಿಪೂಜೆ ಮತ್ತೂ ಹಾನಿಕರ; ಪ್ರಾಪ್ತಜ್ಞಾನಿಗೆ ಮೂರ್ತಿಪೂಜೆ ಬೇಕಾಗಿಯೇ ಇಲ್ಲ." ಎಂಬಂಶವನ್ನು ಯುಕ್ತಿಪೂರ್ವಕವಾಗಿ ಹಿಂದೆಯೇ ಪ್ರತಿ ಪಾದಿಸಿದ್ದೇವೆ. ಹೀಗೆ ಮೂರ್ತಿಪೂಜಾವಿಷಯದಲ್ಲಿ ಕಾಲಭೇದ ದಿಂದಲೂ ವಿಕಲ್ಪಕ್ಕೆ ಅವಕಾಶವಿಲ್ಲವೆಂಬುದು ವ್ಯಕ್ತವಾಗುತ್ತದೆ.

ಪ್ರಶ್ನೆ :—ಹೋಗಲಿ. ಆ ಪ್ರಶ್ನೆಯನ್ನಲ್ಲಿಗೇ ಬಿಡಿ. ಈಗ ನೋಡಿ : ಕಾಲ ಅಖಂಡವೂ, ಏಕರಸವೂ, ಅಚಿಂತ್ಯವೂ ಆದ ತತ್ತ್ವ. ಆ ತತ್ತ್ವದ ಅಳತೆಗಾಗಿ ಮಾನವರು ಗಡಿಯಾರಗಳನ್ನು ರಚಿಸಿಕೊಂಡಿದ್ದಾರೆ. ನಿರಾಕಾರವಾದ ಕಾಲದ ಜ್ಞಾನವನ್ನು ಸಾಕಾರವಾದ ಗಡಿಯಾರದ ಸಹಾಯದಿಂದ ಮಾಡಿಕೊಳ್ಳಲು ಸಾಧ್ಯವಾಗಿದ್ದರೆ, ನಿರಾಕಾರನಾದ ಪರಮಾತ್ಮನ ಜ್ಞಾನವನ್ನು ಸಾಕಾರವಾದ ಮೂರ್ತಿಯ ಸಹಾಯದಿಂದ ಮಾಡಿಕೊಳ್ಳಲೇಕೆ ಸಾಧ್ಯವಿಲ್ಲ?

ಉತ್ತರ :—ನಿರಾಕಾರವೂ, ಅಖಂಡವೂ ಆದ ಕಾಲದ ಜ್ಞಾನವನ್ನು ನೀವು ಸಾಕಾರವಾದ ಗಡಿಯಾರದಿಂದ ಹೊಂದುವಿರೆನ್ನುವುದಕ್ಕಿಂತ, ಆ ಕಾಲದ ಖಂಡಗಳನ್ನು ನೀವು ಊಹಿಸಿಕೊಳ್ಳುತ್ತೀರೆಂದು ಹೇಳಿದರೆ, ಸತ್ಯಕ್ಕೆ ಹೆಚ್ಚು ಹತ್ತಿರವಿರುತ್ತೀರಿ. "ಇಷ್ಟು ಗಂಟೆ ಅಥವಾ ಇಷ್ಟುದಿನ ಕಳೆಯಿತು" ಎಂದು ನಿಮಗೆ ಬೋಧವಾಗಬೇಕಾದರೆ—ಆ ಪರಿಜ್ಞಾನದ ಮೂಲ, ಸೂರ್ಯಾದಿ ಗ್ರಹಗಳ ಗತಿಯೆಂಬುದನ್ನು ಮರೆಯಬೇಡಿ. ಅಂದರೆ, ಸಾಕಾರವಾದ ಗಡಿಯಾರ, ನಿರಾಕಾರವಾದ ಕಾಲದ ಅಳತೆಯ ಜ್ಞಾನವನ್ನು ತೋರಬೇಕಾದರೆ ಅದರ ಕಾರಣ, ಅದರ ಆಕಾರವಲ್ಲ; ಗ್ರಹಗಳನ್ನನುಸರಿಸಿ, ಚಲಿಸಬಲ್ಲ ಅದರಲ್ಲಿರುವ ಯಾಂತ್ರಿಕ ಶಕ್ತಿ. ಅದೇರೀತಿ, ನಿರಾಕಾರನಾದ ಚೈತನ್ಯಸ್ವರೂಪನಾದ ಪರಮಾತ್ಮನ ಜ್ಞಾನದ ಪರಿಚಯಕ್ಕೆ ಸಹಾಯಕವಾಗುವ ಶಕ್ತಿ ಮೂರ್ತಿಗಳಲ್ಲೇನಾದರೂ ಇದೆಯೇ? ಎಂಬ ಪ್ರಶ್ನೆಗೆ ನಿಮ್ಮ ಬಳಿ ಏನಾದರೂ ಉತ್ತರವಿದೆಯೇ? ನಡೆಯುತ್ತಿರುವ ಗಡಿಯಾರವನ್ನು ನೋಡಿ "ಇಷ್ಟು ಗಂಟೆ ಕಳೆಯಿತು; ಇಷ್ಟು ನಿಮಿಷ ತೀರಿತು" ಎಂದು ತಿಳಿದುಕೊಳ್ಳುವಂತೆ, ದೇವಾಲಯಗಳಲ್ಲಿನ ವಿಗ್ರಹವನ್ನು ನೋಡಿ, ಯಾರ ಮನಸ್ಸಿಗಾದರೂ "ದೇವರ ಸೃಜನಶಕ್ತಿ ಇಷ್ಟಿರುತ್ತದೆ; ದೇವರು ಇಂತಹ ನ್ಯಾಯಕಾರಿ" ಎಂಬ ಜ್ಞಾನವೇನಾದರೂ ಉಂಟಾದೀತೇ? ಸಾಕಾರ–ನಿರಾಕಾರ ಎಂಬ ಶಬ್ದಗಳನ್ನು ಪ್ರಯೋಗಿಸುವಾಗ, ದೃಷ್ಟಾಂತಕ್ಕೂ, ಉದ್ದಿಷ್ಟವಸ್ತುವಿಗೂ ಸಾಕಾದಷ್ಟು ಸಾದೃಶ್ಯವಿದೆಯೋ ಇಲ್ಲವೋ ಎಂಬುದನ್ನು ಎಚ್ಚರಿಕೆಯಿಂದ ಯೋಚಿಸುವುದು ಅಗತ್ಯ.

ಪ್ರಶ್ನೆ:—ಎಲ್ಲರೀತಿಯಿಂದಲೂ ಮೂರ್ತಿಪೂಜೆ ನಿಷಿದ್ಧವೇ ಆಗಿದ್ದಲ್ಲಿ, ಹಾಗಾದರೆ, ಇನ್ನು ಸಾಧನೆಮಾಡುವುದು ಹೇಗೆ?

ಉತ್ತರ:—ಸಾಧನೆ ಎಂದರೆ ಮೂರ್ತಿಪೂಜೆಯೆಂದರ್ಥವಲ್ಲ. ಸತ್ಯಮಯನೂ ಚಿನ್ಮಯನೂ, ಆನಂದಮಯನೂ ಆದ ಜಗದೀಶ್ವರನ ಸಾಕ್ಷಾತ್ಕಾರಕ್ಕಾಗಿ, ಮಾತು, ಮನಸ್ಸು ಮತ್ತು ಮೈಯನ್ನು ಒಂದುಗೂಡಿಸಿ ಮಾಡುವ ಜ್ಞಾನ-ಕರ್ಮ-ಉಪಾಸನಾಯುಕ್ತವಾದ ಪ್ರತಿಯೊಂದು ಯತ್ನವೂ ಸಾಧನೆಯೇ. ಸಮಗ್ರಜೀವನವೂ ಒಂದು ಅಖಂಡ ಸಾಧನೆಯೇ.

ಪ್ರಶ್ನೆ:—ಸರಿಯೇ. ಸಾಧನೆ ಮಾಡುವುದು ಹೇಗೆ?

ಉತ್ತರ:—ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನ ಮೂರು ಗುಣಗಳಾದ ಸತ್ತ್ವ, ಚೇತನತ್ವ ಮತ್ತು ಆನಂದ ಈ ತತ್ತ್ವಗಳನ್ನು ತನ್ನಲ್ಲಿ ರೂಢಿಸಿಕೊಳ್ಳಲು ನಿರಂತರವಾಗಿ ಹೆಣಗಬೇಕು. ಜ್ಞಾನಜನ್ಯವಾದ ಗುಣವೇ ಸತ್ತ್ವ; ಜ್ಞಾನ-ಕರ್ಮಜನ್ಯವಾದ ಗುಣವೇ ಚೇತನತ್ವ; ಜ್ಞಾನ-ಕರ್ಮೋಪಾಸನಾಜನ್ಯವಾದ ಗುಣವೇ ಆನಂದ. ಆದುದರಿಂದ ಜ್ಞಾನ-ಕರ್ಮ-ಉಪಾಸನಾಮಯವಾದ ಜೀವನವನ್ನು ರೂಢಿಸಿಕೊಂಡಲ್ಲಿ, ಅದೇ ನಿಜವಾದ ಸಾಧನೆ ಎನ್ನಿಸುತ್ತದೆ. ಈ ಸಾಧನಾಕ್ರಮದಲ್ಲಿ ಭಗವಂತನಿಗೆ ಪ್ರಿಯವಾದ ನ್ಯಾಯ, ದಯೆ, ಕ್ಷಮೆ, ಉದಾರತೆ, ಪ್ರೇಮ ಮೊದಲಾದ ದಿವ್ಯಗುಣಗಳನ್ನು ತನ್ನಲ್ಲಿ ಬೆಳೆಯಿಸಿಕೊಳ್ಳಲು ಸದಾ ಪ್ರಯತ್ನಿಸಬೇಕು. ಇದಕ್ಕಿಂತ ಉತ್ತಮವಾದ ಸಾಧನೆ ಬೇರಾವುದೂ ಇರಲಾರದು. ಒಂದೇ ತರದ ಗುಣ-ಕರ್ಮ-ಸ್ವಭಾವ ಉಳ್ಳವರಲ್ಲಿ ಪರಸ್ಪರ ಪ್ರೀತಿಯುಂಟಾಗುವುದನ್ನು ನಾವು ದಿನದಿನವೂ ನೋಡುತ್ತಲೇ ಇದ್ದೇವೆ. ಉಪಾಸನೆಮಾಡುವ ಬಯಕೆಯುಳ್ಳ ಯಾವ ಭಕ್ತನೂ "ನನ್ನ ಸ್ವಾಮಿ ವಿಕಾರಿ; ನನ್ನ ಸ್ವಾಮಿ ಶಕ್ತಿಹೀನ; ನನ್ನ ಸ್ವಾಮಿ ಅನ್ಯಾಯಿ; ನನ್ನ ಸ್ವಾಮಿ ಕ್ರೂರ" ಎಂದು ಮುಂತಾಗಿ ಭಾವಿಸುವುದಿಲ್ಲ. ತನ್ನ ಸ್ವಾಮಿಯ ವಿಚಾರದಲ್ಲಿ ಇಂತಹ ವಿಪರೀತ ಭಾವನೆಯುಳ್ಳವನಾವನೂ 'ಭಕ್ತ'ನೆನ್ನಿಸಲಾರ; ಆದುದರಿಂದ, ಭಕ್ತನ ಉಪಾಸನೆಯ ಗುರಿಯಾದ ಪರಮಾತ್ಮ, ಭಕ್ತನಿಗಿಂತ ಉತ್ತಮನೇ ಆಗಿರಬೇಕು.

ತನಗಿಂತ ಉತ್ತಮನಾದ ಪರಮಾತ್ಮನಲ್ಲಿರುವ ದಿವ್ಯಗುಣಗಳಿಗನುಗುಣವಾಗಿ ತನ್ನ ಗುಣಗಳನ್ನು ತಿದ್ದಿಕೊಂಡರೆ, ಪರಮಾತ್ಮನಲ್ಲಿ ತಾನಾಗಿಯೇ ಪ್ರೇಮ ಹುಟ್ಟುತ್ತದೆ.

ಪ್ರಶ್ನೆ :—ಪರಮಾತ್ಮನ ಗುಣಗಾನಮಾಡುತ್ತಾ, ಆ ಗುಣಗಳನ್ನು ತನ್ನಲ್ಲಿ ನಿರ್ಮಿಸಿಕೊಳ್ಳಲು ಯತ್ನಿಸುವುದೇ 'ಪೂಜೆ' ಎಂಬುದು ನಿಮ್ಮ ಅಭಿಪ್ರಾಯವೇ ?

ಉತ್ತರ :—ಹೌದು.

ಪ್ರಶ್ನೆ :—ಈ ಪೂಜೆ ಬಹಳ ಗಂಭೀರವಾಗಿಹೋಯಿತು. ಇದರಲ್ಲಿ ಮೂಢರಿಗೆ ಆಸಕ್ತಿ ಹೇಗೆ ಹುಟ್ಟೀತು? ಇದರಲ್ಲಿ ಮನಸ್ಸು ಹೇಗೆ ನಿಂತೀತು ? ಬಾಹ್ಯ ಕ್ರಿಯೆ ಯಾವುದಕ್ಕೂ ಅವಕಾಶವೇ ಇಲ್ಲವಲ್ಲ; ಇನ್ನು ಭಗವಂತನಿಗೆ ನಾವು ನಮ್ಮ ಭಕ್ತಿಯನ್ನು ತೋರಿಸಿಕೊಳ್ಳುವುದು ಹೇಗೆ ?

ಉತ್ತರ —ಪೂಜೆಯ ವಿಷಯದಲ್ಲಿ ನಿಮಗಿರುವ ತಪ್ಪಭಿಪ್ರಾಯವೇ ನಿಮ್ಮನ್ನೀಗ ಭ್ರಾಂತರನ್ನಾಗಿ ಮಾಡುತ್ತಿದೆ. ಪೂಜೆಯೆಂದರೆ, ಚಿಕ್ಕವನು ದೊಡ್ಡವನನ್ನು ಮೆಚ್ಚಿಸಲು ಕೊಡುವ ಪಾರಿತೋಷಕವಲ್ಲ. ಯಾವ ವಸ್ತುವಿನಿಂದ ಯಾವ ಉಪಯೋಗವನ್ನು ಹೊಂದುವುದು ಉಚಿತವೋ, ಅದರಿಂದ ಆ ಉಪಯೋಗವನ್ನು ಪಡೆಯುವುದೇ ನಿಜವಾದ ಪೂಜೆ. ನೀವು ಯಾರನ್ನು ಆಚಾರ್ಯರೆಂದು ಭಾವಿಸಿರುವಿರೋ, ಅವರ ಉಪದೇಶದಂತೆ ನೀವು ನಡೆದರೆ ನೀವವರನ್ನು ಪೂಜಿಸಿದಂತಾಗುವುದೇ ಹೊರತು, ಅವರ ಉಪದೇಶಕ್ಕೆ ಸ್ವಲ್ಪವಾದರೂ ಗಮನಕೊಡದೇ, ಅವರನ್ನು ಚಿನ್ನದ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ, ಊರೆಲ್ಲಾ ಮೆರವಣಿಗೆ ಮಾಡಿದರೂ ಅವರ ಪೂಜೆಯಾದಂತಾಗಲಿಲ್ಲ. ಎರಡನೆಯದಾಗಿ, "ಆಚಾರ್ಯರ ಉಪದೇಶದಂತೆ ನಡೆದು, ಅವರನ್ನು ಸತ್ಕರಿಸಲಿಕ್ಕಾಗಿ, ಬಾಹ್ಯಪೂಜೆ ಮಾಡಬಹುದಲ್ಲ;ಅದರಲ್ಲಿ ದೋಷವೇನು? " ಎಂದು ಕೇಳುವುದಾದರೆ—ಆ ಪಕ್ಷವೂ ಪರಮಾತ್ಮನಲ್ಲಿ ಘಟಿಸಲಾರದು. ಏಕೆಂದರೆ, ಆಚಾರ್ಯನಿಗಿರುವಂತೆ, ಪರಮಾತ್ಮನಿಗೆ ಭೋಕ್ತೃತ್ವವಿಲ್ಲವೆಂದು ಮೊದಲೇ ಪ್ರತಿಪಾದಿಸಿದ್ದೇವೆ.

ಮೂರನೆಯದಾಗಿ, ಬಾಹ್ಯಪೂಜೆ ಅಥವಾ ಭಕ್ತರ ಅಂತರಿಕ ಭಾವನೆಯ ಬಾಹ್ಯ-ಅಭಿವ್ಯಕ್ತಿಯನ್ನು, ಅಂತರ್ಯಾಮಿಯಲ್ಲದ, ಅಲ್ಪಜ್ಞನಾದ ಜೀವಾತ್ಮನು ಅಪೇಕ್ಷಿಸುತ್ತಾನೆಯೇ ಹೊರತು, ಸರ್ವಾಂತರ್ಯಾಮಿಯೂ, ಸರ್ವಜ್ಞನೂ ಆದ ಪರಮಾತ್ಮನು ಅಪೇಕ್ಷಿಸಲಾರನು. ಈಗ ನಾವು ಯಾವುದಾದರೂ ಒಂದು ವಸ್ತುವನ್ನು ಬಯಸಬೇಕಾದರೆ, ಇಲ್ಲವೇ ನಮ್ಮಲ್ಲಿ ಆ ವಸ್ತುವಿಲ್ಲದಿರಬೇಕು ; ಅಥವಾ ಸಾಕಾದಷ್ಟು ಇಲ್ಲದಿರಬೇಕು ; ಅದೂ ಇಲ್ಲದಿದ್ದರೆ-ನಾವು, ಸಾಕಾದಷ್ಟಿಟ್ಟುಕೊಂಡು ಸಹ, ಇನ್ನೂ ಹೆಚ್ಚನ್ನಪೇಕ್ಷಿಸುವ ಲೋಭಿಯಾಗಿರಬೇಕು. ಈ ಮೂರು ಸ್ಥಿತಿಗಳೂ ಸಹ ಅಪೂರ್ಣನಾದ ಜೀವಾತ್ಮನಲ್ಲಿ ಕಂಡುಬರಲು ಸಾಧ್ಯವೇ ಹೊರತು, ಪೂರ್ಣನಾದ ಪರಮಾತ್ಮನಲ್ಲಿ ಘಟಿಸಲಾರವು. ಈ ರೀತಿ, ಎಷ್ಟು ಯೋಚಿಸಿದರೂ ಸಹ, ಬಾಹ್ಯಪೂಜೆ ಅರ್ಥಹೀನವೆಂದೇ ವ್ಯಕ್ತವಾಗುತ್ತದೆ.

ಪ್ರಶ್ನೆ :— ಆದರೆ-ಮಾನಸಪೂಜೆ, ಬಾಹ್ಯಪೂಜೆಯಷ್ಟು ಸುಲಭವಲ್ಲವಲ್ಲ ! ಮೂಢರ ಗತಿಯೇನು ?

ಉತ್ತರ :—ಜ್ಞಾನಿಗಳ ಗತಿಯಾದ ಪರಮಾತ್ಮನೇ ಮೂಢರಿಗೂ ಗತಿ ! ಮಾನಸಪೂಜೆ, ಬಾಹ್ಯಪೂಜೆಗಿಂತ ಕಷ್ಟಕರವಾದುದೆಂಬ ಮಾತೇ ಸರಿಯಲ್ಲ. ಹೂವು, ಹಣ್ಣು, ಕಾಯಿ, ಕಡ್ಡಿ ಮೊದಲಾದುವಕ್ಕೆ ದುಡ್ಡಿಡಬೇಕಾದುದಿಲ್ಲ. ಮನೆಯಿಂದ ದೇಗುಲಕ್ಕೆ, ದೇಗುಲದಿಂದ ಮನೆಗೆ ಪರದಾಡಬೇಕಾದ ಕಾಯಕ್ಲೇಶವಿಲ್ಲ. ಎಲ್ಲಿದ್ದರೆ ಅಲ್ಲೇ, ಒಂದು ಕಾಸೂ ಖರ್ಚಿಲ್ಲದೇ, ಪ್ರೇಮರೂಪನಾದ ಪರಮಾತ್ಮನ ದಿವ್ಯನಾಮಗಳನ್ನು ಧ್ಯಾನಿಸಬಹುದು ! ಮಾನಸಪೂಜೆ ಕಷ್ಟವೆಂದು ಹೇಳುವುದಕ್ಕೆ ಅರ್ಥವೇನಿದೆ ? ಮನಸ್ಸು ನಿಲ್ಲುವುದು ಕಷ್ಟವೆಂಬುದು ನಿಮ್ಮ ಅಭಿಪ್ರಾಯವಾಗಿದ್ದರೆ, ಆ ಕಷ್ಟ ದೇವಾಲಯದಲ್ಲಿಯೂ ತಪ್ಪುವಂತಿಲ್ಲ ! ಅಲ್ಲಿ ಹೋದರೂ ವಿಗ್ರಹದಲ್ಲಿ ಮನ ನಿಲ್ಲಿಸಲು ಯತ್ನಿಸುತ್ತೀರೇ ಹೊರತು, ಪರಮಾತ್ಮನಲ್ಲಲ್ಲ.

ಪ್ರಶ್ನೆ :—ಮೂರ್ತಿಪೂಜೆಯಿಂದ ದೇಶಕ್ಕೆ ಬಹಳ ಹಾನಿಯುಂಟಾಗಿದೆ ಎಂದು ಅನೇಕರು ವಾದಿಸುತ್ತಾರೆ. ಆದರೆ, ಆ ಹಾನಿಯುಂಟಾದುದು ಮೂರ್ತಿ

ಪೂಜೆಯ ಆಯುಕ್ತ ಕ್ರಮದಿಂದಲೇ ಹೊರತು, ಮೂರ್ತಿಪೂಜೆಯಿಂದಲ್ಲ. ದೇವದಾಸಿಯರನ್ನು ಬಿಡುವುದು, ವಿಪರೀತ ದಾನ ದಕ್ಷಿಣೆಗಳನ್ನಿತ್ತು ಪೂಜಕರನ್ನು ಆಲಸಿಗಳನ್ನಾಗಿಯೂ, ವ್ಯಭಿಚಾರಿಗಳನ್ನಾಗಿಯೂ ಮಾಡುವುದು, ಮೂರ್ತಿಗಳ ಮುಂದೆ ನೃತ್ಯವನ್ನೇರ್ಪಡಿಸುವುದು, ಪ್ರಾಣಿ ಬಲಿ—ಈ ಮೊದಲಾದ ದೋಷಗಳು, ವಿಗ್ರಹರಾಧಕರ ದೋಷಗಳೇ ಹೊರತು ಮೂರ್ತಿಪೂಜೆಯದಲ್ಲ. ಇವನ್ನೆಲ್ಲಾ ಬಿಟ್ಟರೆ, ಇನ್ನು ಮೂರ್ತಿಪೂಜೆಯಲ್ಲಿರುವ ದೋಷವೇನು ?

ಉತ್ತರ :—ಹೊರಟಿರುವುದೇ ವಿರುದ್ಧ ದಿಕ್ಕಿನಲ್ಲಿ. ಇನ್ನು ಸಿಕ್ಕಬೇಕಾದ ಫಲ ಸಿಕ್ಕೀತೆಂತು? ನೀವು ಹೇಳಿದ ದೋಷಗಳಲ್ಲಿ ಬಹುಭಾಗವನ್ನು ನಿರ್ಮೂಲ ಮಾಡಿಯೂ ಕೂಡ ಮೂರ್ತಿಪೂಜೆಯನ್ನುಳಿಸಿಕೊಳ್ಳಲು ಸಾಧ್ಯವೆಂದು ನಾವೂ ಒಪ್ಪುತ್ತೇವೆ. ಆದರೆ, ನಾವು ಇದುವರೆಗೆ ತರ್ಕಿಸಿರುವಂತೆ, ಮೂರ್ತಿ ಪೂಜೆ ಯಾವ ರೀತಿಯಲ್ಲಿಯೂ ಉದ್ಧಾರಕ್ಕೆ ಸಹಾಯಕವಾಗದಿರುವಾಗ, ಅದನ್ನೇಕೆ ಉಳಿಸಿಕೊಳ್ಳ ಬೇಕೆಂಬುದೇ ಒಂದು ಪ್ರಶ್ನೆ.

ಪ್ರಶ್ನೆ :—ಮೂರ್ತಿಪೂಜೆಯಿಂದ ಕ್ಷೇಮೂ ಆಗಿರಬಹುದು ; ಆದರೆ, ಮೂರ್ತಿ ಪೂಜೆಯ ಆಶ್ರಯವಿಲ್ಲದಿದ್ದರೆ, ಭಾರತ ವರ್ಷದ ಶಿಲ್ಪಕಲೆ ಇಷ್ಟು ಉನ್ನತ ಸ್ಥಿತಿಗೆ ಬರುತ್ತಿದ್ದಿತೇ ?

ಉತ್ತರ :—ಮೂರ್ತಿಪೂಜೆಯ ಆಶ್ರಯದಲ್ಲಿ ಶಿಲ್ಪಕಲೆ ಬೆಳೆದಿದೆ ಎಂಬುದನ್ನು ನಾವೂ ಒಪ್ಪುತ್ತೇವೆ ; ಆದರೆ, ಮೂರ್ತಿಪೂಜೆಯ ಉದ್ದೇಶ್ಯ, ಶಿಲ್ಪಕಲಾ ವರ್ಧನವೆಂದು ಎಂದೂ ಭಾವಿಸಲ್ಪಟ್ಟಿಲ್ಲ. ಜೇವಿನಹುಣ್ಣಿನಲ್ಲಿಯೂ ಕೊಂಚ ಸಿಹಿ ಸೇರಿಕೊಂಡಿರುವಂತೆ, ಮೂರ್ತಿಪೂಜೆಯು ನೆರಳಿನಲ್ಲಿ ಕಲೆಯೂ ಕೊಂಚ ಆಶ್ರಯಪಡೆದಿರಬಹುದು. ಆದರೆ, ಮೂರ್ತಿಪೂಜೆಯಿಂದಾಗಿರುವ ಆಧ್ಯಾತ್ಮಿಕ ಹಾನಿಯ ಮುಂದೆ, ಕಲಾವರ್ಧನದ ಈ ಲಾಭ ಏತಕ್ಕೂ ಸಾಲದು. ಲಕ್ಷಾಂತರ ಜನರ ರಕ್ತಪಾತಕ್ಕೆ ಕಾರಣವಾಗುವ ಯುದ್ಧದಲ್ಲಿ, ಒಂದು ದೇಶದ ಜನರು ಇನ್ನೊಂದು ದೇಶದ ಜನರ ಸಂಪರ್ಕದಲ್ಲಿ ಬಂದು, ಸಭ್ಯತೆ ಮತ್ತು ಸಂಸ್ಕೃತಿಗಳ ಪರಸ್ಪರ ವಿನಿಮಯ ಮಾಡಿಕೊಳ್ಳುವರೆಂಬುದು ದಿಟ;

ಆದರೆ, ಅವಕ್ಕಾಗಿ ಯುದ್ಧವೆಂದೂ ಕಾವ್ಯವೆನಿಸಲಾರದು, ಅದಿಲ್ಲದೆಯೂ, ಶಾಂತವಾತಾವರಣದಲ್ಲಿ ಪರಸ್ಪರ ಸಾಂಸ್ಕೃತಿಕ ಸಂಪರ್ಕ ಮತ್ತೂ ಚೆನ್ನಾಗಿ ಆಗಬಲ್ಲವು. ಅದೇರೀತಿ, ಕಲೆಯ ಸಲುವಾಗಿಯೇ ಕಲೆಯನ್ನು ವರ್ಧಿಸಲು ಸಾಧ್ಯವಿದೆ.

ಪ್ರಶ್ನೆ :—ಆಯಿತು. ಮೂರ್ತಿಪೂಜೆಯಲ್ಲಿರುವ ಎಲ್ಲಕ್ಕಿಂತ ದೊಡ್ಡ ದೋಷವಾವುದು ?

ಉತ್ತರ :—ಮೂರ್ತಿಪೂಜೆಯಲ್ಲಿರುವ ಎಲ್ಲಕ್ಕಿಂತ ದೊಡ್ಡ ದೋಷವೆಂದರೆ, ಆತ್ಮಾಪಮಾನ. ತಾನು ಸ್ವತಃ ಚೇತನನಾಗಿದ್ದು, ಕ್ರಿಯಾ ಮತ್ತು ಜ್ಞಾನಗಳನ್ನು ಹೊಂದಿದ್ದು ಜಡವಾದ, ಕ್ರಿಯಾಶಕ್ತಿಯಿಲ್ಲದ, ಜ್ಞಾನದ ಲೇಶವನ್ನೂ ಹೊಂದದ ಬೊಂಬೆಗಳೆದುರಿಗೆ, ತಾನೇ ಅಥವಾ ತನ್ನಂತಹವನೇ ಆದ ಜೀವಾತ್ಮನೊಬ್ಬನು, ತನ್ನ ವಿದ್ಯಾಬುದ್ಧಿಗನುಸಾರವಾಗಿ ಚಿತ್ರಿಸಿದ ಅಥವಾ ಕೆತ್ತಿದ ನಿರ್ಜೀವಮೂರ್ತಿಗಳೆದುರಿಗೆ—"ಸ್ವಾಮಿ ! ನೀನೇ ನನಗೆ ಗತಿ!" ಎಂದು ಅಡ್ಡಬೀಳುವ ಆತ್ಮಾಪಮಾನ ! ಮೂರ್ತಿಪೂಜೆಮಾಡುವುದೆಂದರೇನು ? ತಾನು ಕಲ್ಲುಮಣ್ಣುಗಳಿಗಿಂತ ಕೀಳೆಂದು ಹೇಳಿಕೊಳ್ಳುವುದು! ಇದಕ್ಕಿಂತ ದೊಡ್ಡ ವಿಪರೀತಜ್ಞಾನ ಇನ್ನಾವುದಿರಲಿಕ್ಕೆ ಸಾಧ್ಯ ?

ಪ್ರಶ್ನೆ :—ಆಗಲಿ. ಅದರಲ್ಲಿ ತಪ್ಪೇನಿದೆ? ಅಭಿಮಾನವಿರುವವರೆಗೆ ವಿನಯ ಬರಲಾರದು. ವಿನಯವಿಲ್ಲದ ಮೇಲೆ ಭಕ್ತಿಯೂ ಇಲ್ಲ! ಅದು ವಿಪರೀತ ಜ್ಞಾನವಲ್ಲ ! ವಿನಯ ಗುಣದ ಪರಾಕಾಷ್ಠೆ !

ಉತ್ತರ :—ಅಭಿಮಾನವಿಲ್ಲದ ಮೇಲೆ, ಯಾವ ಪೂಜೆಯು ಇರಲಾರದೆಂಬುದನ್ನು ಚೆನ್ನಾಗಿ ತಿಳಿಯಿರಿ. ಅಭಿಮಾನವೆಂದರೆ, ಅದು ಸ್ವತಃ ಕೆಟ್ಟ ವಸ್ತುವೇನಲ್ಲ! "ನಾನು"—ಎಂದು ಹೇಳಿಕೊಳ್ಳುವುದೇ ಅಭಿಮಾನ. "ನಾನು" ಎಂಬವನೇ ಉಪಾಸಕ. "ನಾನು"—ಇಲ್ಲದ ಮೇಲೆ–ಉಪಾಸಕನಿಲ್ಲ; ಉಪಾಸಕನಿಲ್ಲದ ಮೇಲೆ ಉಪಾಸನೆಯೂ ಇಲ್ಲ! ಜೀವಾತ್ಮನು ಜೀವಾತ್ಮನಾಗಿರುವವರೆಗೆ, ಅಭಿಮಾನ ತಪ್ಪದೆಂಬುದನ್ನು ಯಾರೂ ತಿರಸ್ಕರಿಸುವಂತಿಲ್ಲ. "ತಾನಿದ್ದೇನೆ" ಎಂಬ ಅಂತಜ್ಞಾನದ

ಅಭಿವ್ಯಕ್ತಿಯೇ ಅಭಿಮಾನ. ತನ್ನ ಇರುವಿಕೆಯನ್ನು ಇಲ್ಲವೆನ್ನುವ ಅಸ್ತಿತ್ವದ ಕಲ್ಪನೆ ಅಸಂಭವ.

ಇನ್ನು, ವಿನಯಗುಣವನ್ನು ನಾವೂ ಗೌರವಿಸುತ್ತೇವೆ. ಆದರೆ, ನಾವು ಮೇಲೇ ಹೇಳಿರುವುದರಿಂದ, ವಿನಯಗುಣದ ಪ್ರಕಾಶನವಾದರೂ "ಅಭಿಮಾನ"ದ ಗಣಿಯಿಂದಲೇ ಹೊರಡಬಲ್ಲದೆಂಬುದು ವ್ಯಕ್ತವಾಗುತ್ತದೆ. "ನಾನು" ಅಳಿದ ಮೇಲೆ, "ನನ್ನ ಗುಣ" ಮಾತ್ರ ಸ್ವತಂತ್ರವಾಗಿ ಉಳಿಯಲಾರದು.

ಮತ್ತೆ, ಅಭಿಮಾನದಲ್ಲೇ ತನ್ನ ಮೂಲವನ್ನುಳ್ಳ ಈ ವಿನಯಗುಣವನ್ನು ಯಾವ ತತ್ವದ ಮುಂದೆ ವ್ಯಕ್ತಪಡಿಸ ಬೇಕೆಂಬ ವಿಚಾರ ಬೇರೆ ಬರುತ್ತದೆ. ನನ್ನ ವಿನಯವನ್ನು ಅರ್ಥಮಾಡಿಕೊಳ್ಳಬಲ್ಲ ಮತ್ತೊಂದು ಚೇತನ ತತ್ವದ ದುರಿಗೆ ನಾನು ತಲೆಬಾಗಿದರೆ, ಅಥವಾ ಮೃದು ಮಧುರವಾದ ಹಾಗೂ ಸನ್ಮಾನ ಸೂಚಕವಾದ ಮಾತುಗಳನ್ನಾಡಿದರೆ, ಆ ತತ್ವ ಅದುಕ್ಕುಚಿತವಾದ ಅಥವಾ ಹಲಸಂದರ್ಭಗಳಲ್ಲಿ ಅನುಚಿತವಾದ ಪ್ರತಿಕ್ರಿಯೆಯನ್ನು ತೋರ ಬಲ್ಲದು. ಅದನ್ನು ಬಿಟ್ಟು, ಯಾವುದನ್ನೂ ಅರ್ಥ ಮಾಡಿಕೊಳ್ಳಲಾರದ ಕಲ್ಲು–ಮಣ್ಣುಗಳ ಮುಂದೆ ಸಾವಿರ ಸಾರಿ ಅಡ್ಡ ಬಿದ್ದರೆ ತಾನೇ ಬರುವ ಫಲವೇನು? ನೀವೇನೇ ಭಾವಿಸಿಕೊಂಡರೂ ಸರಿ, ಮೂರ್ತಿಯು ಪರಮಾತ್ಮನಾಗಲಾರದೆಂದೂ, ಅಂತಃ ಸಾಕ್ಷಿಯಾದ ಪರಮಾತ್ಮನಿಗೆ ಅಂತರಂಗದ ಭಾವನೆಯನ್ನು ನಿವೇದಿಸಬೇಕಾದರೆ ಯಾವ ಬಾಹ್ಯಪೂಜೆಯೂ ಆವಶ್ಯಕವಿಲ್ಲವೆಂದೂ ನಾವಿದುವರೆಗೆಷ್ಟೋಸಾರಿ ಹೇಳಿದ್ದೇವೆ.

ಪ್ರಶ್ನೆ :—ಆತ್ಮಾಪಮಾನವಾದರೆ ಆಗಲಿ. ಭಗವದ್ದ್ರೋಹವೇನೂ ಇಲ್ಲವಷ್ಟೆ?

ಉತ್ತರ :—ಅಭಿಮಾನವಿಲ್ಲದಮೇಲೆ ಪೂಜೆಯೇ ಇಲ್ಲವೆಂದು ನಾವು ಮೇಲೆ ಹೇಳಿದ್ದೇವೆ. ಬೇರೆಯವರಿಂದ ಬರಬಹುದಾದ ಅಪಮಾನವನ್ನು ಸಹಿಸು ವಲ್ಲಿ, ಅನೇಕ ಸಂದರ್ಭಗಳಲ್ಲದು ಉತ್ತಮ ಗುಣವೆಂದು ಭಾವಿಸಲ್ಪಡ ಬಹುದಾದರೂ, ತನಗೆ ತಾನೇ ಮಾಡಿಕೊಳ್ಳುವ ಅಪಮಾನ ಎಂದಿಗೂ ಉತ್ತಮ ಅಥವಾ ಸಾತ್ವಿಕ ಗುಣದ ಪ್ರಕಾಶಕವಾಗಲಾರದು. ಅದು

ಆತ್ಮಹತ್ಯೆಗೇ ಸಮನೆಂದು ಹೇಳಬಹುದು. ಇನ್ನು ಭಗವದ್ದ್ರೋಹದ ಪ್ರಶ್ನೆ ನಿರ್ವಿಕಾರನೂ, ನಿರಾಕಾರನೂ, ಆನಂದಮಯನೂ ಆದ ಪರಮಾತ್ಮನಿಗೆ, ನಾವು 'ಮಾನ' ಕೊಡಲು ಸಮರ್ಥರಲ್ಲವೆಂದಮೇಲೆ, 'ಅಪಮಾನ ಅಥವಾ ದ್ರೋಹ' ಮಾಡಲೂ ಸಮರ್ಥರಲ್ಲವೆಂಬುದು ನಿತ್ಯಸತ್ಯ. ನೀವು ಕಲ್ಲಿನೆದುರಿಗೆ ಅಡ್ಡಬಿದ್ದು, ಸಾವಿರಸಾರಿ-"ಇದು ಪರಮಾತ್ಮ" ಎಂದು ಹೇಳಿದರೂ ಸಹ, ಅದರಿಂದ ಭಗವಂತನಲ್ಲೇನೂ ವಿಕಾರವುಂಟಾಗುವಂತಿಲ್ಲ. ಆದರೆ, ಭಗವಂತನನ್ನು ಉಬ್ಬಿಸುವ ಅಥವಾ ಕುಗ್ಗಿಸುವ ಸಲುವಾಗಿ ಪೂಜೆ ಮಾಡುವೆನೆಂಬ ಭಾವನೆ ಮಾನವರಲ್ಲಿರುವವರೆಗೆ, ಈ ಅಜ್ಞಾನದ ಬಂಧನ ಹರಿಯುವಂತಿಲ್ಲ. ವಿಪರೀತ ಜ್ಞಾನದಿಂದ ಮಾಡಲ್ಪಡುವ ಕ್ರಿಯೆ ವಿಪರೀತ ಕ್ರಿಯೆಯೇ ಸರಿ ; ವಿಪರೀತ ಕ್ರಿಯೆಯ ಫಲವಾದರೂ ವಿಪರೀತವಾಗಿಯೇ ಇರುವುದು. ಚೇತನ ಪರಮಾತ್ಮನನ್ನು ಜಡಮೂರ್ತಿಯೆಂದು ಭಾವಿಸುವುದು ವಿಪರೀತಜ್ಞಾನ ; ಆ ಜಡ ವಿಗ್ರಹದ ಪೂಜೆ ವಿಪರೀತ ಕ್ರಿಯೆ. ಆ ವಿಪರೀತ ಕ್ರಿಯೆಯ ಫಲ-ಇಂದಿನ ಹಿಂದೂ ಧರ್ಮೀಯರ ಬಾಳ್ವೆ ! ಹೊರಟುದು ತನಗಿಂತ ಶ್ರೇಷ್ಠನಾದ ಪರಮಾತ್ಮನನ್ನು ಹುಡುಕಲಿಕ್ಕೆ ; ಸಾಧಿಸಿದುದು, ತನಗಿಂತ ಕೀಳಾದ ಪ್ರಕೃತಿಯ ಮುಂದೆ ಅಡ್ಡಬೀಳುವ, ಅದನ್ನೇ ಪರಮಾತ್ಮನೆಂದು ಭಾವಿಸುವ ಅಖಂಡ ಅಜ್ಞಾನವನ್ನು! ವಿಪರೀತ ಫಲವಹುದೋ ಅಲ್ಲವೋ ?

ಇನ್ನು, ಭಗವಂತನ ಆದೇಶ, ಜ್ಞಾನವೋ, ಅಜ್ಞಾನವೋ? ಭಗವಂತನು ಜೀವಾತ್ಮರಿಂದ ಅಜ್ಞಾನವನ್ನು ಆಶಿಸುವನೆಂದು ಯಾವ ಆಸ್ತಿಕನೂ ಹೇಳಲಾರ. ಹಾಗಿದ್ದ ಮೇಲೆ, ಅಜ್ಞಾನಜನಕವೂ, ಅಜ್ಞಾನ ಪ್ರಸಾರಕವೂ ಆದ ಮೂರ್ತಿ ಪೂಜೆ, ಭಗವದಾದೇಶಕ್ಕೆ ವಿರುದ್ಧವಲ್ಲವೇ ?

ಪ್ರಶ್ನೆ : —ಭಗವಂತನು ನಿರ್ವಿಕಾರನಾದುದರಿಂದ, ನಾವು ಪೂಜೆಮಾಡಿದರೆ ಅವನಿಗೆ ಆನಂದವಾಗುವುದಿಲ್ಲ; ಪೂಜೆಮಾಡದಿದ್ದರೆ ದುಃಖವೂ ಆಗುವುದಿಲ್ಲ, ಎಂದು ತಾನೇ ನೀವು ಹೇಳುವುದು?

ಉತ್ತರ : —ಹೌದು.

ಪ್ರಶ್ನೆ :—ಹಾಗಿದ್ದ ಮೇಲೆ ಪೂಜೆಮಾಡಬೇಕಾದುದೇ ಇಲ್ಲ!

ಉತ್ತರ :— ಹೌದು. ಪೂಜೆಯೆಂಬ ಪದಕ್ಕೆ ಬಾಹ್ಯಪೂಜೆಯೆಂಬುದೇ ಅರ್ಥವೆಂದು ನೀವು ಭಾವಿಸುವುದಾದರೆ, ಪೂಜೆ ಬೇಕಾಗಿಯೇ ಇಲ್ಲ.

ಪ್ರಶ್ನೆ :—ಬಾಹ್ಯಪೂಜೆ ಏನು, ಆಂತರಿಕ ಪೂಜೆ ಏನು? ಯಾವುದೂ ಬೇಕಾಗಿಯೇ ಇಲ್ಲ.

ಉತ್ತರ :—ಇದೀಗ ನಿಮ್ಮ ಮತವಲ್ಲ; ನಾಸ್ತಿಕಮತ. ಬಾಹ್ಯಪೂಜೆ ಅನಾವಶ್ಯಕವೆಂದ ಮಾತ್ರಕ್ಕೆ ಆಂತರಿಕ ಪೂಜೆಯೂ ಬೇಡವೆಂದು ಹೇಳಿದಂತಾಗಲಿಲ್ಲ.

ಪ್ರಶ್ನೆ :—ಆಂತರಿಕ ಪೂಜೆ ತಾನೇ ಏತಕ್ಕೆ ಬೇಕು, ಹೇಳಿ.

ಉತ್ತರ :–ಪರಮಾತ್ಮನನ್ನು ತೃಪ್ತಿಪಡಿಸಬೇಕೆಂದಲ್ಲ; ಜೀವಾತ್ಮನಲ್ಲಿ ಆನಂದಗುಣ ಉಂಟಾಗಲಿಕ್ಕಾಗಿ.

ಪ್ರಶ್ನೆ :—ಅದನ್ನು ಸ್ವಲ್ಪ ಸ್ಪಷ್ಟಪಡಿಸಿ.

ಉತ್ತರ :—ಒಳ್ಳೆಯದು. ಇಲ್ಲಿ ನೋಡಿ. ಮೂರು ಅನಾದಿ ತತ್ವಗಳಿವೆ: ಪ್ರಕೃತಿ, ಜೀವಾತ್ಮ, ಪರಮಾತ್ಮ—ಎಂದು ಅವನ್ನು ಕರೆಯುತ್ತಾರೆ. ಪ್ರಕೃತಿ ಜಡತತ್ವ; ಅದರ ವಿಷಯದಲ್ಲಿ 'ಸತ್' ಎಂದರೆ 'ಇರುವಿಕೆ' ಎಂದಿಷ್ಟೇ ಹೇಳಬಹುದು. ಅದು ಜಡವಾದುದರಿಂದ, ಅದಕ್ಕೆ ಸುಖ ದುಃಖಗಳ ಅನುಭವವಾಗಲಾರದು. ಎರಡನೆಯ ತತ್ವ–ಜೀವಾತ್ಮ. ಇದು ಚೇತನ ತತ್ವ; ಇದರ ವಿಷಯದಲ್ಲಿ, "ಸತ್ + ಚಿತ್"-ಎಂದರೆ, "ಇರುವಿಕೆ ಮತ್ತು ಚೈತನ್ಯ" ಎಂಬ ಎರಡು ಮಾತುಗಳನ್ನಾಡಬಹುದು. ಇದು ಚೇತನವಾದುದರಿಂದ, ಇದಕ್ಕೆ ಸುಖ–ದುಃಖಗಳ ಅನುಭವವೂ ಆಗುತ್ತದೆ. ಇನ್ನು ಮೂರನೆಯ ತತ್ವ–ಪರಮಾತ್ಮ. ಇದರ ಬಗ್ಗೆ, "ಸತ್ + ಚಿತ್ + ಆನಂದ" ಎಂದು ಹೇಳಬಹುದು. ಅಂದರೆ, ಇದು ಇರುವಿಕೆಯೂ ಹೌದು; ಚೇತನವೂ ಹೌದು; ಆನಂದಮಯವೂ ಅಹುದು. ಇದು ಆನಂದಮಯವಾದುದರಿಂದ ಸುಖ–ದುಃಖಗಳ ಆವರಣಕ್ಕೆ ಸಿಕ್ಕದು. ಅಂದರೆ, ಒಟ್ಟಿನಲ್ಲಿ ಹೀಗೆ ಹೇಳಿ

ದಂತಾಯಿತು: ಪ್ರಕೃತಿ ಜಡವಾದುದರಿಂದ ಭೋಕ್ತೃವಲ್ಲ; ಪರಮಾತ್ಮ ದ್ವಂದ್ವಾತೀತನಾದುದರಿಂದ ಭೋಕ್ತೃವಲ್ಲ. ಈ ಎರಡು ತತ್ವಗಳನ್ನು ಬಿಟ್ಟ ಮೇಲೆ ಉಳಿಯುವುದು ಜೀವಾತ್ಮ. ಆ ಜೀವಾತ್ಮನೇ ಭೋಕ್ತೃ. ಅವನೇ ಸುಖ–ದುಃಖಗಳನ್ನನುಭವಿಸುವವನು. ಬೇಡವಾದುದರ ಪ್ರಾಪ್ತಿ ಮತ್ತು ಬೇಕಾದುದರ ಅಪ್ರಾಪ್ತಿ–ಇದೇ ದುಃಖ; ಬೇಕಾದುದರ ಪ್ರಾಪ್ತಿ ಮತ್ತು ಬೇಡವಾದುದರ ಅಪ್ರಾಪ್ತಿ–ಇದೇ ಸುಖ. ಈ ಪ್ರಾಪ್ತ್ಯಪ್ರಾಪ್ತಿಗಳ ಸಂಗ್ರಾಮವೇ ಈ ಜಗದ್ವ್ಯಾಪಾರ. ಈ ಜಗದ್ವ್ಯಾಪಾರದಲ್ಲಿ ಬೇಡವಾದುದನ್ನು ಬಿಡಲೂ, ಬೇಕಾದುದನ್ನರಸಲೂ ಅಲೆದಾಡುವವನು ಜೀವಾತ್ಮ. ಬೇಡವಾದ ದುರ್ಗುಣಗಳನ್ನು ಬಿಡುತ್ತಾನೆ; ಬೇಕಾದ ಸದ್ಗುಣಗಳನ್ನು ಅರಸುತ್ತಾನೆ; ಬೇಕಾದ ಸದ್ಗುಣಗಳನ್ನು ಅರಸುತ್ತಾನೆ. ಅವನಿಗಾರು ಶರಣು? ಪ್ರಕೃತಿಗೆ ಶರಣಾಗುವನೇ? ಅವನಲ್ಲಿಲ್ಲದ ವಿಶೇಷ ಗುಣವಾವುದೂ ಅದರಲ್ಲಿಲ್ಲ. ಎರಡನೆಯದಾಗಿ, ಜಡವಾದ ಪ್ರಕೃತಿ, ಚೇತನನಾದ ಜೀವಾತ್ಮನಿಗೆ ಅಧೀನಳಾಗಿರಬಲ್ಲಳೇ ಹೊರತು, ಅಧಿಷ್ಠಾತ್ರಿಯಾಗಲಾರಳು, ಇನ್ನುಳಿದುದು ಪರಮಾತ್ಮತತ್ವ ಜೀವಾತ್ಮನು ಆ ಪರಮಾತ್ಮನ ಕಡೆಗೇ ತಿರುಗಬೇಕು. ಏಕೆಂದರೆ, ಜೀವಾತ್ಮನಲ್ಲಿಲ್ಲದ ಒಂದು ವಿಶೇಷಗುಣ–ಆನಂದ – ಆ ಪರಮಾತ್ಮನಲ್ಲಿದೆ. ಆ ಆನಂದದ ಅಭಾವವೇ ಜೀವಾತ್ಮನ ಪರದಾಟಕ್ಕೆ ಕಾರಣ. ಅದನ್ನು ಹೊಂದಲಿಕ್ಕಾಗಿ ಅವನು ಪರಮಾತ್ಮನನ್ನು ಆಶ್ರಯಿಸುತ್ತಾನೆ. ಈ ಆಶ್ರಯಿಸುವ ಕ್ರಿಯೆಯೇ ಉಪಾಸನೆ. ನಾನು ಆಹಾರಾಭಾವದಿಂದ ಕ್ಷುಧಾರ್ತನಾಗಿದ್ದೇನೆಂದು ಭಾವಿಸಿರಿ. ನಿಮ್ಮ ಬಳಿ ನನಗೆ ಬೇಕಾದ ಆಹಾರವಿದೆ; ಎದುರಿನಲ್ಲಿರುವ ತಿರುಕನ ಬಳಿ ಅದಿಲ್ಲ. ನಾನಾರನ್ನು ಆಶ್ರಯಿಸಬೇಕು? ಆ ತಿರುಕನನ್ನಾಶ್ರಯಿಸಿದರೆ, ನನ್ನೊಂದಿಗೆ ಸೇರಿ, ಅರ್ತನಾದ ಮಾಡಿ, ನನ್ನ ದುಃಖವನ್ನವನಿನ್ನೂ ಜಾಸ್ತಿ ಮಾಡಬಹುದು; ನಿಮ್ಮನ್ನಾಶ್ರಯಿಸಿದರೆ, ನೀವು ನಮ್ಮ ಹಸಿವನ್ನು ದೂರಮಾಡಬಲ್ಲಿರಿ. ಮತ್ತು ನಾವು ನಿಮ್ಮನ್ನು ಆಶ್ರಯಿಸುವುದು, ನಿಮ್ಮ ಹೊಟ್ಟೆಯನ್ನು ತುಂಬಿಸಲಿಕ್ಕಲ್ಲ; ನಮ್ಮ ಕ್ಷುಧೆಯನ್ನು ದೂರಮಾಡಿಕೊಳ್ಳಲಿಕ್ಕೆ. ಅದೇರೀತಿ ಜೀವಾತ್ಮನು, ತನ್ನಲ್ಲಿಲ್ಲದ ಆನಂದಗುಣವನ್ನು, ಆನಂದಸ್ವರೂಪನಾದ ಪರಮಾತ್ಮನಿಂದ ಪಡೆಯಬಲ್ಲನೇ ಹೊರತು, ಜಡವಾದ ಪ್ರಕೃತಿಯಿಂದಲ್ಲ. ಹೀಗಿರುವಾಗ, ಜಡಪ್ರಕೃತಿ

ಯಿಂದಲೇ ನಿರ್ಮಿತವಾದ ಮೂರ್ತಿಗಳ ಪೂಜನದಿಂದ ಪರಮಾತ್ಮ ಸಂಬಂಧದ ಆನಂದ ಪಡೆಯಬಲ್ಲೆನೆಂಬುದು ಎಷ್ಟು ಹಾಸ್ಯಾಸ್ಪದ?

ಪ್ರಶ್ನೆ —: ಹಾಗಾದರೆ, ಪ್ರಕೃತಿತತ್ವ ಯಾವ ಕೆಲಸಕ್ಕೂ ಬಾರದ ವಸ್ತುವೆಂಬದೋ ನಿಮ್ಮ ಭಾವನೆ?

ಉತ್ತರ :—ನಾವೆಂದಿಗೂ ಹಾಗೆನ್ನುವದಿಲ್ಲ. ಭೌತಿಕಾನಂದ ಪ್ರಾಪ್ತಿಗೆ ಪ್ರಕೃತಿಯ ಆಶ್ರಯ ಅನಿವಾರ್ಯ; ಆದರೆ, ಅಧ್ಯಾತ್ಮಪ್ರಪಂಚದ ಆನಂದಕ್ಕೆ ಪ್ರಕೃತಿಯ ಪೂಜೆ ಬೇಕಾಗಿಲ್ಲವೆಂಬುದೇ ನಮ್ಮ ಮತ. ಪ್ರಕೃತಿಯ ಸ್ಥಾನದಲ್ಲಿ ಪ್ರಕೃತಿಯಿರಲಿ. ಆಧ್ಯಾತ್ಮಿಕ ಪ್ರಪಂಚದಲ್ಲಿ ಅದಕ್ಕೆ ಉನ್ನತಸ್ಥಾನ ಬೇಕಿಲ್ಲ.

ಪ್ರಶ್ನೆ :—ಜಡ-ಚೇತನ, ಪ್ರಕೃತಿ-ಪುರುಷ-ಇದೆಲ್ಲಾ ಕಾಲ್ಪನಿಕ. ಅದ್ವೈತವಾದದ ದೃಷ್ಟಿಯಲ್ಲಿ, ಪ್ರಕೃತಿ ಬೇರೆ; ಪುರುಷ ಬೇರೆ ಎಂಬ ಭೇದವಿಲ್ಲ. ಪರಮಾತ್ಮನೇ ಜಡನಾಗಿಯೂ, ಚೇತನನಾಗಿಯೂ ಕಾಣಿಸಿಕೊಳ್ಳುತ್ತಾನೆ. ಆದುದರಿಂದ—ಪ್ರಕೃತಿಪೂಜೆ ತುಚ್ಛವೆಂಬ ಭಾವನೆಯೇ ಸರಿಯಲ್ಲ.

ಉತ್ತರ :—ಉಪಾಸನಾ ಅಥವಾ ಪೂಜಾಪ್ರಸಂಗ ಸಿದ್ಧಿಸಬೇಕಾದರೆ, ಕನಿಷ್ಟ ಪಕ್ಷ ಪೂಜ್ಯ-ಪೂಜಕ, ಎಂಬ ಎರಡು ತತ್ವಗಳಾದರೂ ಇರಲೇ ಬೇಕಾಗುತ್ತದೆ; ಅದ್ವೈತವಾದದಲ್ಲಿ ಉಪಾಸನೆಗಾವ ಸ್ಥಾನವೂ ಇಲ್ಲ. ಆದುದರಿಂದ ಅದ್ವೈತದ ಮಾತನ್ನು ನಿಲ್ಲಿಸಿರಿ.

ಪ್ರಶ್ನೆ:—ನಾವು ಹೇಳಿದ ಅದ್ವೈತ ಚೇತನ್ಯೈಕವಾದವಲ್ಲ. ನಾವೂ ಸಾಧ್ಯ ಸಾಧಕ ಎಂಬೆರಡು ತತ್ವಗಳನ್ನಾದರಿಸುತ್ತೇವೆ. ಆದರೆ, ಸಾಧ್ಯತತ್ವವಾದ ಪರಮಾತ್ಮನು ಜಡಚೇತನರೂಪಗಳಲ್ಲಿ ವ್ಯಕ್ತನಾಗಿದ್ದಾನೆ.

ಉತ್ತರ:—ಇಂತಹ ಕಲುಷಿತವೂ, ಭ್ರಾಂತಿಯುಕ್ತವೂ ಆದ ಅಭಿಪ್ರಾಯಗಳಿಂದಲೇ ಇಂದು ನಮ್ಮ ಧರ್ಮವೀಸ್ಥಿತಿಗೆ ಬಂದಿರುವುದು. ಪರಮಾತ್ಮನು ನಿರ್ವಿಕಾರನೂ, ನಿರಾಕಾರನೂ, ಅಖಂಡನೂ ಆದ ಚೇತನತತ್ವವಾಗಿರಬೇಕಾದರೆ, ಅವನು ವಿಕಾರಿಯೂ, ಸಾಕಾರವೂ, ಖಂಡರೂಪವೂ ಆದ ಜಡರೂಪ ಹೊಂದುವುದು ಹೇಗೆ ಸಂಭವ? ಒಂದುವೇಳೆ, ಸಂಭವವಾದಲ್ಲಿ,

ಅವನು ಜೀವಾತ್ಮನಿಗಿಂತ ಯಾವರೀತಿ ಉತ್ತಮನೆನಿಸಬಲ್ಲನು? ಜಡವು ಚೇತನವಾಗಿಯೂ, ಚೇತನವು ಜಡವಾಗಿಯೂ ಮಾರ್ಪಡುವ ಒಂದೇ ಒಂದು ದೃಷ್ಟಾಂತವಾದರೂ ಇದೆಯೇ? "ಪರಮಾತ್ಮನ ಕೊಂಚ ಭಾಗ ಜಡ; ಕೊಂಚಭಾಗ ಚೇತನ" ಎಂದಮೇಲೆ, ಆ ವಿಕಾರಿಯೂ, ಸಂಯೋಗ-ವಿಯೋಗ ಜಾಡ್ಯಗ್ರಸ್ತನೂ ಆದ ದೇವರು ಪೂಜಾರ್ಹನಾದಾನೆಂತು?

ಪ್ರಶ್ನೆ:—ಹೋಗಲಿ ಬಿಡಿ, ಸ್ವಲ್ಪ ಹಿಂದೆ ಹೋಗೋಣ. ನೀವು "ಪೂಜೆ ಮಾಡುವುದರಿಂದ ನಿರ್ವಿಕಾರನಾದ ದೇವರಿಗೆ ಆನಂದವೂ ಆಗುವುದಿಲ್ಲ; ಬಿಡುವುದರಿಂದ ದುಃಖವೂ ಆಗುವುದಿಲ್ಲ. ಕೇವಲ ಜೀವಾತ್ಮನ ವಿಕಾಸಕ್ಕಾಗಿ ಉಪಾಸನೆ ಅವಶ್ಯಕ" ಎಂದು ಹೇಳುತ್ತಿದ್ದೀರಿ. ಇದು ಸ್ವಾರ್ಥವಲ್ಲವೇ? "ಎಲ್ಲವನ್ನೂ ಪರಮಾತ್ಮನ ಪ್ರೀತಿಗಾಗಿ ಅರ್ಪಿಸು"—ಎಂದು ಎಲ್ಲ ಸಾಧು-ಸಂತರೂ ಆದೇಶಿಸುತ್ತಾ ಬಂದಿದ್ದಾರೆ; ಆದರೆ, ನೀವು ಮಾತ್ರ "ಎಲ್ಲವನ್ನೂ ನಿನ್ನಸಲುವಾಗಿ ಮಾಡಿಕೋ ದೇವರಿಗೇನೂ ಬೇಕಿಲ್ಲ" ಎನ್ನುತ್ತೀರಲ್ಲ! ಸ್ವಾರ್ಥಿಯಾದವನು ಸಿದ್ಧಿಯನ್ನೆಂತು ಹೊಂದಬಲ್ಲನು?

ಉತ್ತರ:—"ನಾನು ಮುಕ್ತನಾಗಬೇಕು; ನಾನು ಮೋಕ್ಷ ಹೊಂದಬೇಕು" ಎಂಬ ಅಭಿಪ್ರಾಯದಿಂದ ತಾನೇ ಎಲ್ಲರೂ ಸಾಧನೆ ಮಾಡುವುದು? "ಪರಮಾತ್ಮನ ದುಃಖ ದೂರವಾಗಲಿ. ಅವನಿಗೆ ಆನಂದವಾಗಲಿ. ಅವನ ಉದ್ಧಾರವಾಗಲಿ" ಎಂಬ ಭಕ್ತರನ್ನೂ ನೀವು ನೋಡಿದ್ದೀರಾ? ಒಂದು ವೇಳೆ ಅಂತಹವರಿದ್ದಲ್ಲಿ ಅವರು ಭಕ್ತರಲ್ಲ; ಭಗವಂತನ ಹಿತೈಷಿಗಳಾದ ರಕ್ಷಕರೇ ಆಗಿರಬೇಕು. ಸ್ವಾರ್ಥ, ಅಭಿಮಾನ—ಈ ಗುಣಗಳಿಲ್ಲದ ಜೀವಾತ್ಮರೇ ಇಲ್ಲ. ಆದರೆ—ಆ ಸ್ವಾರ್ಥ, ಆ ಅಭಿಮಾನ, ಪರರಿಗೆ ಕೇಡಾಗುವ ಮಟ್ಟಕ್ಕೆ ಹೋಗದಂತೆ ನೋಡಿಕೊಳ್ಳಬೇಕಾದುದು ಮಾತ್ರ ಸಾಧಕನ ಕರ್ತವ್ಯ.

ಪ್ರಶ್ನೆ:—ಹಾಗಾದರೆ, ನೀವು ಅಗ್ನಿಹೋತ್ರದಲ್ಲಿ ಬಾರಿ ಬಾರಿ ಉಚ್ಚರಿಸುವ "ಇದಮಗ್ನಯೇ ಇದನ್ನಮಮ; ಇದಂ ಸೋಮಾಯ—ಇದನ್ನಮಮ" ಈ ಮೊದಲಾದ ಮಂತ್ರಗಳೆಲ್ಲಾ ಅರ್ಥವಿಲ್ಲದ ಕೂಗುಗಳಾದುವು, ಅಷ್ಟೆ.

ಉತ್ತರ:—ಇಲ್ಲ. ನಾವಿದುವರೆಗೆ ಯಾವ ದೃಷ್ಟಿಯಿಂದ ವಿವೇಚಿಸಿಮಾಡಿದ್ದೇವೋ, ಆ ದೃಷ್ಟಿಯು ಅಗ್ನಿಹೋತ್ರದ ಭಾವನೆಗೇನೂ ವಿರುದ್ಧವಾಗಿಲ್ಲ. ಅಗ್ನಿಹೋತ್ರದ ಆಧಾರವೇ ತ್ಯಾಗ ಅಥವಾ ಆತ್ಮಸಮರ್ಪಣವು ಪರಮಾತ್ಮನ ಉದ್ಧಾರಕ್ಕಾಗಿ ಅಲ್ಲ; ಉಪಾಸಕನ ಸ್ವಂತ ಉದ್ಧಾರಕ್ಕಾಗಿ. ಈ ಭಾವನೆ "ಅಯಂತ ಇಧ್ಮ ಆತ್ಮಾ" ಎಂಬ ಮಂತ್ರದಲ್ಲಿ ತಾನೇತಾನಾಗಿ ವ್ಯಕ್ತವಾಗಿದೆ. "ಭಗವಂತ! ಈ ನನ್ನ ಆತ್ಮ ನಿನ್ನ ಸಮಿತ್ತು." ಎನ್ನುತ್ತಾನೆ, ಉಪಾಸಕ. ಬೆಂಕಿಯಲ್ಲಿ ಸಮಿತ್ತು ಬಿದ್ದು, ತಾನೇ ಬೆಂಕಿಯ ತೇಜದಿಂದ ಪ್ರಕಾಶಿತವಾಗುತ್ತದೆ. ಅದೇರೀತಿ, ಉಪಾಸಕ, ಪರಮಾತ್ಮನಲ್ಲಿ ತನ್ಮಯನಾಗಿ, ತಾನೂ ತೇಜಸ್ವಿಯಾಗುತ್ತಾನೆ. ಆಹುತಿಯ ಮಂತ್ರಗಳಲ್ಲಿನ ಶಬ್ದಗಳಿಗೂ ಪರಮಾತ್ಮನ ಉದ್ಧಾರಪರವಾದ ಅರ್ಥಗಳನ್ನು ಮಾಡುವುದು ಕೇವಲ ಹಾಸ್ಯಾಸ್ಪದ. "ಇದಮಗ್ನಯೇ—ಇದನ್ನಮಮ" ಎಂದಾಗ, "ಇದು ಪರಮಾತ್ಮನಿಗಾಗಿ" ಎಂಬ ಅರ್ಥ ಸೂಕ್ತವಲ್ಲ; "ಇದು ಪರಮಾತ್ಮನ ಪ್ರಾಪ್ತಿಯ ಸಲುವಾಗಿ" ಎಂಬರ್ಥವೇ ಯುಕ್ತಿಯುಕ್ತವಾದುದು. "ಇದನ್ನಮಮ" ಎಂಬ ತ್ಯಾಗಭಾವನೆಯಾದರೂ ಆತ್ಮವಿಕಾಸದ ಪರಿಚಾಯಕವೇ ಹೊರತು ಈಶ್ವರೋದ್ಧಾರದ ಹಂಬಲಲ್ಲ.

ಪ್ರಶ್ನೆ:—ಸರಿ. ಮುಂದಕ್ಕೆ?

ಉತ್ತರ:—ನಾವು ಆಂತರಿಕ ಪೂಜೆ ಬೇಕೆಂದು ಹೇಳುತ್ತಿದ್ದೆವಲ್ಲವೇ? ಆಂತರಿಕ ಪೂಜೆಯೇ ಏತಕ್ಕೆ ಬೇಕೆಂಬ ಪಕ್ಷವನ್ನೀಗ ಪ್ರತಿಪಾದಿಸುತ್ತೇವೆ. ಎಲ್ಲ ಯೋಗಿಗಳೂ, ಜ್ಞಾನಿಗಳೂ ಏಕಕಂಠದಿಂದ ಪರಮಾತ್ಮನು 'ಗುಹಾಹಿತ' ಎಂದರೆ "ಹೃದಯವೆಂಬ ಗುಹೆಯಲ್ಲಡಗಿರುವವನು" ಎಂದೇ ಹೇಳುತ್ತಾ ಬಂದಿದ್ದಾರೆ. ಇದರರ್ಥ—"ಪರಮಾತ್ಮನು ಮಾನವರ ಹೃದಯಗಳಲ್ಲಿ ಮಾತ್ರವಿದ್ದಾನೆ" ಎಂದಲ್ಲ. ಸರ್ವವ್ಯಾಪಕನು ಎಲ್ಲಿಡೆಯೂ ಇದ್ದೇ ಇದ್ದಾನೆ. ಆದರೆ, ಪ್ರಕೃತಿಸ್ಥನಾದ ಪರಮಾತ್ಮನ ಧ್ಯಾನ ಅಸಂಭವವೆಂದೇ ತೋರುತ್ತದೆ. ಏಕೆಂದರೆ, ಸ್ಥೂಲವಾದ ಪ್ರಕೃತಿಯೇ ಧ್ಯಾತೃವಿನ ಮನಸ್ಸನ್ನೆಳೆದುಕೊಂಡು ಬಿಡುತ್ತದೆ. ಆದುದರಿಂದ, ಪರಮಾತ್ಮನ ಧ್ಯಾನ ಹಿಂದಾಗಿ

ಹೋಗುತ್ತದೆ. ಜೀವಾತ್ಮನು ಪ್ರಕೃತಿಗಿಂತ ಸೂಕ್ಷ್ಮತರನಾದುದರಿಂದ, ನಾವು ನಮ್ಮಲ್ಲೇ ಅಂದರೆ ಜೀವಾತ್ಮನಲ್ಲೇ ಪರಮಾತ್ಮನದರ್ಶನಮಾಡಲು ಯತ್ನಿಸಿದರೆ, ಪ್ರಕೃತಿಯ ಸಂಪರ್ಕವಿಲ್ಲದ ಪರಮಾತ್ಮನ ಸಾಕ್ಷಾತ್ಕಾರ ಸಹಜವಾಗಿಯೇ ಆಗುತ್ತದೆ. ನಮ್ಮ ಮನಸ್ಸನ್ನೇ ಸ್ಥೂಲವಸ್ತುವಾವುದೂ ಅಂತರಾತ್ಮನಲ್ಲಿಲ್ಲವಾದುದರಿಂದ ಮನಸ್ಸು ಬಲವಂತದಿಂದಾದರೂ ಸೂಕ್ಷ್ಮ ಪರಮಾತ್ಮನಲ್ಲಿ ಲಯವಾಗಲೇ ಬೇಕಾಗುತ್ತದೆ. ಜೀವಾತ್ಮನ ನಿವಾಸಸ್ಥಾನ ಹೃದಯ; ಆ ಹೃನ್ಮಂದಿರಸ್ಥನಾದ ಪ್ರಕೃತಿವರ್ಜಿತನಾದ ಜೀವಾತ್ಮನಲ್ಲಿ ವ್ಯಾಪಕನಾಗಿರುವ ಪರಮಾತ್ಮದೇವನ ದರ್ಶನವೆಷ್ಟು ಪ್ರೈಜ್ಞಾನಿಕವಾದುದು!

ಪ್ರಶ್ನೆ :—ಹಾಗಿದ್ದರೇಲೆ, ಸ್ತುತಿ, ಪ್ರಾರ್ಥನೆ, ಉಪಾಸನೆ ಎಂಬ ಹೆಸರಿನಿಂದ, ಉದ್ಬುದ್ಧವಾದ ಮಂತ್ರಗಳನ್ನೂ, ಭಜನೆ–ಕೀರ್ತನೆಗಳನ್ನೂ ಹಾಡಬೇಕಾದುದೇನು? ಸುಮ್ಮನೆ ಮೌನದಿಂದ ಕುಳಿತರಾಯಿತಲ್ಲ.

ಉತ್ತರ :—ನಾವು ಅರಸಹತ್ತಿರುವುದು ಪರಮಾತ್ಮನನ್ನು. ಚಿತ್ತವು ಆ ಪರಮಾತ್ಮನ ಗುಣಗಳನ್ನು ವರ್ಣನ ಮಾಡುತ್ತಾ ಹೋದಲ್ಲಿ ಮನಸ್ಸು ಆ ಪರಮಾತ್ಮನಲ್ಲೇ ನಿಲ್ಲುತ್ತದೆ. ನೀವು ಯಾವುದಾದರೂ ಒಂದು ವಸ್ತುವನ್ನು ಹುಡುಕಬೇಕೆಂದು ಹೊರಟಾಗ, ಆ ವಸ್ತುವಿನ ಲಕ್ಷಣವನ್ನರಿತೇ ತಾನೇ ಹುಡುಕುವರಿಯುತ್ತೀರಿ? ಅದೇರೀತಿ, ಪರಮಾತ್ಮನ ಗುಣಗಳನ್ನರಿತರೆ, ಅವನ ಸಾಕ್ಷಾತ್ಕಾರ ಸುಗಮವಾಗುತ್ತದೆ. ಮಂತ್ರ ಅಥವಾ ಭಜನೆ ಎಂದರೆ, ಭಗವಂತನ ಗುಣವರ್ಣನೆ ಮಾತ್ರ. ಚಿತ್ತದ ಸ್ಥಿರೀಕರಣಕ್ಕೆ ಗುಣಗಾನಕ್ಕಿಂತ ಸುಲಭವಾದ ಸಾಧನವಾವುದೂ ಇಲ್ಲ. ದಿನದಿನವೂ ಈ ಮಾತಿನ ಅನುಭವ ನಿಮಗಾಗುತ್ತಿಲ್ಲವೇ? ನಿಮ್ಮ ಕಣ್ಣೆದುರಿಗಿಲ್ಲದಿರುವ ಯಾವನಾದರೊಬ್ಬ ಮಹಾತ್ಮನ, ಮಿತ್ರನ ಅಥವಾ ಪ್ರೇಮಿಯ ಗುಣಗಣಗಳನ್ನು ಸ್ಮರಿಸುತ್ತಾ ಸ್ಮರಿಸುತ್ತಾ ನಿಮ್ಮ ಚಿತ್ತವಾತನಲ್ಲೇ ಲಯವಾಗುವುದಿಲ್ಲವೇ? ಅದೇರೀತಿ, ಪರಮಾತ್ಮನ ಗುಣಗಾನ ಮಾಡುತ್ತಾ ಮಾಡುತ್ತಾ ಚಿತ್ತವವನಲ್ಲೇ ಲಯವಾಗುವುದು.

ಇನ್ನು ಮಂತ್ರ ಅಥವಾ ಭಜನೆಗಳನ್ನು ಗಟ್ಟಿಯಾಗಿ ಏತಕ್ಕೆ ಹಾಡ

ಬೇಕು? ಸುಮ್ಮನೆ ಸ್ಮರಣೆಮಾಡಿಕೊಂಡರೆ ಸಾಲದೇ? ಎಂದು ನೀವು ಕೇಳಬಹುದು. ಆರಂಭದಲ್ಲಿ, ಚಿತ್ತದ ಸ್ಥಿರೀಕರಣಕ್ಕೆ ಸಾಧನರೂಪವಾಗಿ ಶಬ್ದವನ್ನಂಗೀಕರಿಸುತ್ತೇವೆಯೇ ಹೊರತು ಮತ್ತೇನಿಲ್ಲ. ಮೌನದಿಂದಲೇ ಗುಣಧ್ಯಾನ ಮಾಡಬಲ್ಲಷ್ಟು ಹದವಾದ ಚಿತ್ತವಿದ್ದಲ್ಲಿ ಶಬ್ದೋಚ್ಚಾರಣೆಯೂ ಬೇಕಾಗಿಲ್ಲ. ಧ್ಯಾನಾವಸ್ಥೆಗೆ ತಕ್ಕವಾತಾವರಣದ ನಿರ್ಮಾಣಕ್ಕೆ ಮಂಜುಲವಾದ ಶಬ್ದವಿಸ್ತರ ಮಟ್ಟಿಗೆ ಸಹಾಯಕವಾಗಬಲ್ಲದೆಂಬುದನ್ನು ಪ್ರತಿಯೊಬ್ಬರೂ ಬಲ್ಲರು.

ಪ್ರಶ್ನೆ :—'ಪರಮಾತ್ಮನ ಗುಣ' ಎಂದು ನೀವಾವುದನ್ನು ನಿರ್ದೇಶಿಸುತ್ತೀರಿ? ಮಾನವನ ಬುದ್ಧಿ, ಅವನು ಮಾನವನಾಗಿರುವವರೆಗೂ ಅಪೂರ್ಣವಾಗಿಯೇ ಇರುತ್ತದೆ. ಈ ಅಪೂರ್ಣರಾದ ಬುದ್ಧಿಯ ಸಹಾಯದಿಂದ, ಪೂರ್ಣನಾದ ಪರಮಾತ್ಮನ ಗುಣ-ನಿರ್ಣಯ ಮಾಡಲು ಹೊರಡುವುದು ದುಸ್ಸಾಹಸವೇ ಸರಿ.

**ಉತ್ತರ** :— ಮಾನವನ ಬುದ್ಧಿ ಅಪೂರ್ಣವೆಂದು ನಾವೂ ಒಪ್ಪುತ್ತೇವೆ. ಪೂರ್ಣನಾದ ಪರಮಾತ್ಮನ ಲಕ್ಷಣ ನಿರ್ಣಯ, ಅಪೂರ್ಣಬುದ್ಧಿಯ ಹಿಡಿತದಿಂದ ಹೊರಗಿನ ದೆಂಬ ವಾದವಲ್ಲಿಯೂ ಬಿಗಿಯಿದೆ. ಆದರೆ, ಬುದ್ಧಿಯ ಅಪೂರ್ಣತ್ವದ ಜಾಗವನ್ನು ಬುದ್ಧಿಯ ಅಭಾವಕ್ಕೆ ಕೊಡಲು ಯಾರೂ ಒಪ್ಪಲಾರರೆಂಬುದೂ ಅಷ್ಟೇ ಸತ್ಯ. ಪೂಜೆ ಅಥವಾ ಉಪಾಸನೆ ಎಂದೊಡನೆಯೇ, ಭಕ್ತನ ಮನಸ್ಸಿನಲ್ಲಿ ತನಗಿಂತ ಉತ್ತಮವಾದ ಬೇರೊಂದು ತತ್ತ್ವದ ಕಲ್ಪನೆ ತಾನಾಗಿಯೇ ಮೂಡುತ್ತದೆ. ತನಗಿಂತ ನಿಕೃಷ್ಟವಾದ ಗುಣಗಳನ್ನುಳ್ಳ ತತ್ತ್ವವನ್ನು ದೇವರೆಂದು ಪೂಜಿಸಲು ಯಾರ ಮನಸ್ಸೂ ಒಪ್ಪಲಾರದು. ನಾಗರಹಾವನ್ನೂ, ಮಂಗನನ್ನೂ ಪೂಜಿಸುವ ಅಜ್ಞಾನಿಗಳಾದರೂ ಸಹ, "ಆ ಹಾವು ವಿಷ್ಣುದೇವರ ಹಾಸಿಗೆಯಾಗಿರುವುದರಿಂದ, ತನಗಿಂತ ವಿಷ್ಣುವಿಗೆ ಹೆಚ್ಚು ಹತ್ತಿರದಲ್ಲಿದೆ. ಆದುದರಿಂದ, ತನಗಿಂತ ಹೆಚ್ಚು ಪವಿತ್ರವಾದುದು. ಹನುಮಂತ ಶ್ರೀ ರಾಮನಿಗೆ ನಿಃಸ್ವಾರ್ಥವಾದ ಸೇವೆ ಸಲ್ಲಿಸಿ, ರಾಮದೇವರಿಗೆ ಪ್ರಿಯನಾಗಿದ್ದಾನೆ. ಆದುದರಿಂದ ಅವನು ತನಗಿಂತ

ಶ್ರೇಷ್ಠ". ಎಂಬ ಭಾವನೆಯಿಂದಲೇ ಪೂಜಿಸುತ್ತಾರೆ. ಕೊನೆಗೆ ಮಾರಿ, ಮಸಣಿ, ಕಾಳಿ ಮೊದಲಾದ ಕ್ರೂರದೇವತೆಯರನ್ನು ಪೂಜಿಸುವ ಮೂಢರೂ ಸಹ, ಆ ದೇವತೆಯರು ತಮಗಿಂತ ಶ್ರೇಷ್ಠರೆಂದೇ ತಿಳಿದು ಪೂಜಿಸುತ್ತಾರೆ. ಭಕ್ತರಿಗಿಂತ ಭಕ್ತಿಭಾಜನನು ದೊಡ್ಡವನೆಂಬ ಮಾತನ್ನು ಮೂಢರಿಂದ ಹಿಡಿದು ವಿದ್ವಾಂಸರವರೆಗೆ ಎಲ್ಲರೂ ಒಪ್ಪಿಯೇ ಒಪ್ಪುತ್ತಾರೆ.

ಇನ್ನು, ಇಂತಹ ಆಧ್ಯಾತ್ಮಿಕ ವಿಷಯಗಳಲ್ಲಿ, ವಿಚಾರ ಶೀಲರಾದ ವಿದ್ವಾಂಸರ ಮಾತಿಗೆ, ಮೂಢರ ಮಾತಿಗಿಂತ ಹೆಚ್ಚು ಬೆಲೆಯಿರುವುದೆಂಬು ದನ್ನು ಎಲ್ಲರೂ ಒಪ್ಪುತ್ತಾರೆ. ಯಾವ ವಿಚಾರಶೀಲನೂ ಸಹ, ಅನ್ಯಾಯ, ಅಸತ್ಯ, ದಂಭ, ಪರಹಿಂಸೆ, ಕ್ರೌರ್ಯ, ಮೊದಲಾದ ದುರ್ಗುಣಗಳನ್ನು ಒಳ್ಳೆಯದೆಂದು ಭಾವಿಸಲಾರನು. ತನ್ನ ವಿಷಯದಲ್ಲೇ ಈ ಗುಣಗಳನ್ನು ಅವನು ಉಚಿತವೆಂದು ಭಾವಿಸಲು ಒಪ್ಪದಿರುವಾಗ, ತನಗಿಂತ ಉತ್ತಮನಾದ ತನ್ನ ಭಕ್ತಿಭಾಜನ ಪರಮಾತ್ಮನಲ್ಲಿ ಇಂತಹ ದುರ್ಗುಣಗಳನ್ನು ಆರೋಪಿಸ ಬಲ್ಲನೇ ? ಅಲ್ಲದೆ, ಜೀವಾತ್ಮನ ಅಲ್ಪಶಕ್ತಿತ್ವವು ಹೆಜ್ಜೆ ಹೆಜ್ಜೆಗೂ ವ್ಯಕ್ತ ವಾಗುತ್ತಿರಬೇಕಾದರೆ, ಈ ಅನಂತವಿಶ್ವದ ಸೃಷ್ಟಿ–ಸ್ಥಿತಿ–ಲಯಗಳು ಪರ ಮಾತ್ಮನ ಅನಂತಶಕ್ತಿತ್ವದ ಪರಿಚಾಯಕ ಗುಣಗಳೆಂದು ಸುಲಭವಾಗಿಯೇ ಕಂಡು ಬರುವುದಿಲ್ಲವೇ? ಜೀವಾತ್ಮನ ಅಪೂರ್ಣ ಬುದ್ಧಿಯು, ಪರಮಾತ್ಮನ ಪೂರ್ಣಗುಣರಾಶಿಯನ್ನು ಅಳೆಯಲು ಅಸಮರ್ಥವೆಂಬುವನ್ನೊಪ್ಪಿದರೂ ಸಹ, ಆ ಬುದ್ಧಿಯು ಈ ವಿಷಯದಲ್ಲಿ ಪೂರ್ಣ ಅಪ್ರಯೋಜಕವಲ್ಲವೆಂಬುದು ತಾನಾಗಿಯೇ ಗೊತ್ತಾಗುತ್ತದೆ.

ಪ್ರಶ್ನೆ :—ಒಟ್ಟಿನಲ್ಲಿ ನೀವೂ ಮೂರ್ತಿಪೂಜಕರೇ ಆದಿರಿ. ನಾವು ರೇಖಾಚಿತ್ರ ಗಳನ್ನು ಆಶ್ರಯಿಸಿದರೆ ನೀವು ಶಬ್ದ ಚಿತ್ರಗಳನ್ನಾಶ್ರಯಿಸುತ್ತೀರಿ. ನಾವು, ಚಿತ್ರಕಲಾ ಕೋವಿದರು, ಪರಮಾತ್ಮನ ಗುಣಗಳನ್ನು ವ್ಯಕ್ತಪಡಿಸಲು ಕೊರೆದ ಮೂರ್ತಿಗಳನ್ನು ಸಾಧನವಾಗಿ ಮಾಡಿಕೊಂಡರೆ, ನೀವು ಶಬ್ದಗಳ ಮೂಲಕ–"ಪರಮಾತ್ಮನು ಅಂತಹವನು ; ಇಂತಹವನು." ಎಂಬ ಚಿತ್ರ ವನ್ನು ಕಲ್ಪಿಸಿಕೊಂಡು ಅದನ್ನು ಸಾಧನವಾಗಿ ಮಾಡಿಕೊಳ್ಳುತ್ತೀರಿ, ಅಷ್ಟೆ.

ಉತ್ತರ :—ನಾವು ನಿಮ್ಮ ಮೂರ್ತಿಪೂಜೆಯ ಪ್ರತಿಯೊಂದು ಅಂಗವನ್ನೂ

ಹಿರಿಹಿರಿದು, ಇಷ್ಟು ಸ್ಪಷ್ಟವಾಗಿ ಖಂಡಿಸಿದ ಮೇಲೂ ಸಹ, ನಮ್ಮನ್ನೂ ನಿಮ್ಮ ಕೂಟದಲ್ಲೇ ಸೇರಿಸಿಕೊಳ್ಳಬೇಕೆಂಬ ಪ್ರೇಮ ನಿಮಗಿದ್ದಲ್ಲಿ, ನಮ್ಮದೇನೂ ಅಡ್ಡಿಯಿಲ್ಲ. ಆದರೆ, ಈ ಕೃತಿಯ ಆರಂಭದಲ್ಲೇ ನಾವು ವರ್ಣಿಸಿರುವ ಮೂರ್ತಿಪೂಜಾಶಬ್ದದ ಲಕ್ಷಣ ಅಥವಾ ಪರಿಭಾಷೆಯನ್ನೊಂದಿಷ್ಟು ಜ್ಞಾಪಿಸಿಕೊಂಡಿದ್ದರೆ ಚೆನ್ನಾಗಿತ್ತು.

ಪರಮಾತ್ಮನು ನಿರಾಕಾರನೆಂದಮಾತ್ರಕ್ಕೆ, ಅವನು ಅನಿರ್ವಚನೀಯನೆಂದು ಹೇಳಿದಂತಾಗಲಿಲ್ಲ. "ಅವನಿಗೆ ಆಕಾರವಿಲ್ಲ." ಎಂಬ ಕಥನವೇ ದೇವನ ವಚನೀಯತ್ವವನ್ನು ಸಾರುತ್ತಿವೆ. ಬೇರೆ ಮಾತುಗಳಲ್ಲಿ ಹೇಳಬೇಕೆಂದರೆ, ನಿಮ್ಮ ಸಾಧನ 'ಮೂರ್ತಿ' ಯಾದರೆ, ನಮ್ಮ ಸಾಧನ ಪರಮಾತ್ಮನ ನಿರ್ವಚನೀಯತ್ವ.

ಪ್ರಶ್ನೆ :—ಹೋಗಲಿ. ಇವೆಲ್ಲಾ ಜ್ಞಾನಿಗಳ ಮಾತಾಯಿತು. ನಿಮ್ಮ ರೀತಿಯಲ್ಲಿ, ಪಾಮರರು ಹೇಗೆ ಉಪಾಸನೆ ಮಾಡಬೇಕು?

ಉತ್ತರ :—ಹಿಂದೆ ಸೂಕ್ಷ್ಮವಾಗಿ ಹೇಳಿದ್ದೇವೆ. ಪಾಮರರೂ ಸಹ, ಪರಮಾತ್ಮನ ಗುಣಗಾನ ಮಾಡಬಲ್ಲರು. ಗುಣಗಾನ ಮಾಡುತ್ತಾ, ಅದಕ್ಕನುರೂಪವಾಗಿ ತಮ್ಮ ಜೀವನಗಳನ್ನು ಮಾರ್ಪಡಿಸಿಕೊಳ್ಳುತ್ತಾ ಹೋಗಬೇಕು, ಅಂದರೆ, ಪರಮಾತ್ಮನು ನ್ಯಾಯಕಾರಿ ಎಂದರೆ ಸಾಲದು; ಅದರಲ್ಲಿ ರುಚಿ ಕಂಡುಬರಬೇಕಾದರೆ, ತಾನೂ ನ್ಯಾಯಕಾರಿ ಯಾಗಬೇಕು. ಪರಮಾತ್ಮನು ಸತ್ಯಸ್ವರೂಪನೆಂದು ಹಾಡಿಬಿಟ್ಟರೆ ಸಾಲದು; ತಾನೂ ಸತ್ಯವಂತನಾಗಲು ಯತ್ನಿಸಬೇಕು. ಇದೇ ರೀತಿ, ಪರಮಾತ್ಮನ ಗುಣಗಳಿಗನುಸಾರ, ತನ್ನ ಗುಣಗಳನ್ನೂ ತಿದ್ದಿಕೊಳ್ಳುತ್ತಾಹೋದಲ್ಲಿ, ಪರಮಾತ್ಮನಲ್ಲಿ ತಾನಾಗಿಯೇ ಅಕ್ಕರೆ ಬೆಳೆಯುತ್ತಾ ಹೋಗುತ್ತದೆ. ದಿವ್ಯವಾದ ಆನಂದವೂ ತಾನಾಗಿಯೇ ಲಭಿಸುತ್ತದೆ.

ಇಂತಹ ಮಾನಸಪೂಜೆ ಕಷ್ಟವೆಂದು ಭಾವಿಸುವುದೇ ತಪ್ಪು. ಎಂತಹ ಮೂಢನಾದರೂ—ಅವನಿಗೆ ಬಯಕೆ ಯೊಂದಿದ್ದಲ್ಲಿ—ಇದನ್ನು ಚೆನ್ನಾಗಿ ಆಚರಿಸಬಹುದು. ಜೀವನವನ್ನು ಮಾತ್ರ ಹೊಲಸಾಗಿಟ್ಟುಕೊಂಡು, ಸುಮ್ಮನೆ

ಮೂರ್ತಿಗಳಿಗೆ ನಾಲ್ಕಾರು ಸಾರಿ ಅಡ್ಡಬೀಳುವುದಕ್ಕಿಂತ ಇದು ಕಷ್ಟವೆಂಬುದೇನೋ ನಿಜ. ಆದರೆ, ಮೂಢನನ್ನು ಮೂಢನಾಗಿಯೇ ಇಡುವುದು ಉಪಾಸನೆಯ ಆದರ್ಶವಲ್ಲ. ಮೂಢರ ಆಚಾರವನ್ನೇ ಆಧಾರವಾಗಿಟ್ಟುಕೊಂಡು, ಮಾಡುವ ವಾದವೂ ಸರಿಯಾದುದಲ್ಲ. ಆತ್ಮವಿಕಾಸ ಉಪಾಸನೆಯ ಆದರ್ಶವೇ ಹೊರತು, ಬರಿಯ ಸರಳತೆಯೊಂದೇ ಯಾವ ಶ್ರೇಯಸ್ಸಿಗೂ ಕಾರಣವಾಗಲಾರದು. ಅದೂ ಅಲ್ಲದೆ, ಬಾಹ್ಯಪೂಜೆಗಿಂತ, ಮಾನಸಪೂಜೆ ಹೇಗೆ ಸುಲಭವೆಂಬುದನ್ನು ಹಿಂದೆ ಚೆನ್ನಾಗಿ ಪ್ರತಿಪಾದಿಸಿಯೇ ಇದ್ದೇವೆ.

ಪ್ರಶ್ನೆ :—ಕಣ್ಣೆದುರಿಗೇನೂ ಇಲ್ಲದಿದ್ದರೆ, ಪಾಮರರು—"ದೇವರೇ ಇಲ್ಲ. ಇನ್ನು ಪೂಜೆ ಏತರದು ?" ಎಂದು ಭಾವಿಸಿ ನಾಸ್ತಿಕರೇ ಆಗಿಹೋಗುತ್ತಾರಲ್ಲ ! ಮುಂದೇನುಗತಿ ?

ಉತ್ತರ :—ಜಡವಸ್ತುವನ್ನು ದೇವರೆಂದು ಭಾವಿಸುವ ಆಸ್ತಿಕತೆಗಿಂತ, ನೇರವಾದ ನಾಸ್ತಿಕತೆ ಯಾವ ರೀತಿಯಿಂದಲೂ ಕೀಳಲ್ಲ. ಪ್ರಕೃತಿಯು ದೇವರಲ್ಲ; ಚೇತನರೂಪನಾದ ದೇವರು ಬೇರೆಯೇ ಇರುವನು—ಎಂಬ ತತ್ವದ ಜ್ಞಾನವನ್ನು ಪಾಮರರ ಹೃದಯಗಳಲ್ಲಿಯೂ ಬೇರೂರುವಂತೆ ಮಾಡಬೇಕಾದುದು ಜ್ಞಾನಿಗಳ ಕರ್ತವ್ಯ. ನಗರದಿಂದ ಅತಿದೂರದಲ್ಲಿರುವ ಒಬ್ಬ ಹಳ್ಳಿಗನಿಗೆ, ಹೊಗೆಯ ಬಂಡಿ ತೋರಿಸುವುದು ಕಷ್ಟವೆಂದು ಭಾವಿಸಿ, ಎತ್ತಿನಗಾಡಿಯೇ ಹೊಗೆ ಬಂಡಿ ಎಂದು ಹೇಳಿಬಿಡುವುದು ಯಾವ ದೃಷ್ಟಿಯಿಂದಲೂ ಸಮಂಜಸವೆನಿಸಲಾರದು.

ಇದುವರೆಗೆ, ಕೇವಲ ಬುದ್ಧಿಯ ಆಧಾರದಿಂದ ತರ್ಕಮಾಡಿ ನೋಡಿದುದಾಯಿತು. ಈಗ ನಮ್ಮ ಧರ್ಮ ಗ್ರಂಥಗಳ ಅಭಿಪ್ರಾಯ ಈ ವಿಷಯದಲ್ಲಿ ಏನಿರುತ್ತದೆಂಬುದನ್ನು ಸಂಕ್ಷೇಪವಾಗಿ ನೋಡೋಣ. ಎಲ್ಲಕ್ಕಿಂತ ಮೊದಲು ಈ ಪುಸ್ತಕದ ಆದಿಯಲ್ಲಿಯೇ ನಾವು ಎರಡು ಮಂತ್ರಗಳನ್ನು ಕೊಟ್ಟಿದ್ದೇವೆ. ಮಂತ್ರವನ್ನು ವಿವರಿಸಬೇಕಾಗಿಲ್ಲ. ಈಗ ಇನ್ನೂ ಕೆಲವು ವೇದಮಂತ್ರಗಳನ್ನು ಓದೋಣ. ಎಷ್ಟು ಸ್ಪಷ್ಟವಾಗಿ ನಿರಾಕಾರಪರಮಾತ್ಮನ ಸ್ವರೂಪ ಚಿತ್ರಿತವಾಗಿದೆ ಎಂಬುದು ತಾನಾಗಿಯೇ ವ್ಯಕ್ತವಾಗುತ್ತದೆ.

ನತಂ ವಿದಾಥಯು ಇಮಾ ಜಜಾನಾನ್ಯದ್ಯುಷ್ಮಾ ಕಮಂತರಂ ಬಭೂವ ।
ನೀಹಾರೇಣ ಪ್ರಾವೃತಾ ಜಲ್ಪ್ಯಾ ಚಾಸುತೃಪ ಉಕ್ಥಶಾಸಶ್ಚರಂತಿ ॥
[ಋಗ್ವೇದ. ಮಂಡಲ-೧೦. ಸೂಕ್ತ-೮೨. ಮಂತ್ರ-೭]

"ಯಾವನು ಈ ಸೃಷ್ಟಿಯನ್ನು ರಚಿಸಿದ್ದಾನೋ ಮತ್ತು ಯಾವನು ನಿಮ್ಮ ಅಂತರಂಗದಲ್ಲಿಯೂ ವ್ಯಾಪಿಸಿದ್ದಾನೋ ಆ ಪರಮಾತ್ಮನನ್ನು ನೀವು ತಿಳಿದಿಲ್ಲ. ಅಜ್ಞಾನದ ಪೊಬ್ಬಿನಲ್ಲಿ, ಮಾನವರು ವ್ಯರ್ಥವಾಗಿ ವಿತಂಡಾ ವಾದ ಮಾಡುತ್ತಾ, ಕಟ್ಟು-ಕಟ್ಟಳೆಗಳನ್ನು ನಿರ್ಮಿಸುತ್ತಾ ಓಡಾಡುತ್ತಾರೆ."
ಸರ್ವಾಂತರ್ಯಾಮಿಯಾದ ಜಗದೀಶ್ವರನಿಗೆ ಆಕಾರ ಕಲ್ಪಿಸುವುದು ಬರಿಯದೊಂದು ಕಲ್ಪನೆ ಮಾತ್ರ.

ವೇನಸ್ತತ್ಪಶ್ಯನ್ನಿಹಿತಂ ಗುಹಾ ಸದ್ಯತ್ರ ವಿಶ್ವಂ ಭವತ್ಯೇಕನೀಡಂ ।
ತಸ್ಮಿನ್ನಿದಂ ಸಂ ಚ ವಿಚೈತಿ ಸರ್ವಂ ಸ ಓತಃ ಪ್ರೋತಶ್ಚ ವಿಭೂಃ ಪ್ರಜಾಸು ॥
[ಯಜುರ್ವೇದ. ಅಧ್ಯಾಯ-೩೨, ಮಂತ್ರ-೮.]

"ಯಾವನಲ್ಲಿ ಈ ವಿಶ್ವವು ಲೀನವಾಗಿದೆಯೋ ಆ ಪರಮಾತ್ಮನನ್ನು ವಿದ್ವಾಂಸನು ಅಂತಃಸ್ಥಿತ ಸತ್ತತ್ವವೆಂದು ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಅವನಲ್ಲಿಯೇ ಇದು ಉತ್ಪನ್ನವಾಗುತ್ತದೆ; ಅವನಲ್ಲಿಯೇ ಲಯ ಹೊಂದುತ್ತದೆ. ಆ ಜಗತ್ಪತಿಯು ಸರ್ವಪ್ರಾಣಿಗಳಲ್ಲಿಯೂ ಓತಪ್ರೋತನಾಗಿದ್ದಾನೆ."
ಈ ರೀತಿ ಸರ್ವಾಂತರ್ಯಾಮಿಯೂ, ಸರ್ವವ್ಯಾಪಕನೂ ಆದ ಪರಮಾತ್ಮನು ನಿರಾಕಾರನಾಗಿಯೇ ಇರಬೇಕೆಂಬುದು ಸ್ವತಃ ಸಿದ್ಧ.

ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾ ಅತ್ಯತಿಷ್ಠದ್ದಶಾಂಗುಲಮ್ ॥
[ಋಗ್ವೇದ ಮಂಡಲ-೧೦, ಸೂಕ್ತ-೯೦. ಮಂತ್ರ-೧.]

ಸಹಸ್ರಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ಸರ್ವತಃ ಸ್ಪೃತ್ವಾತ್ಯತಿಷ್ಠದ್ದಶಾಂಗುಲಮ್ ॥
[ಯಜುರ್ವೇದ. ಅಧ್ಯಾಯ-೩೧. ಮಂತ್ರ-೧]

ಸಹಸ್ರಶೀರ್ಷಾಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ಸರ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್ ॥
[ಪೂ, ಅ-೬, ಖಂ-೪-ಮಂ-೩, ಸಾಮ]

ಸಹಸ್ರಬಾಹುಃ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್ ।
ಸ ಭೂಮಿಂ ವಿಶ್ವತೋ ವೃತ್ವಾತ್ಯತಿಷ್ಠದ್ದಶಾಂಗುಲಮ್ ॥
[ಅಥರ್ವವೇದ. ಕಾಂಡ-೧೯. ಸೂಕ್ತ-೬. ಮಂತ್ರ-೧.]

ಶೀರ್ಷಾ-ಬಾಹು, ಸರ್ವತಃ-ವಿಶ್ವತಃ ಸ್ಪೃತ್ವಾ-ವೃತ್ವಾ, ಇಂತಹ ಅತಿ ಸಾಮಾನ್ಯವಾದ ಬದಲಾವಣೆಗಳೊಂದಿಗೆ, ಒಂದೇ ಮಂತ್ರವು ನಾಲ್ಕು ವೇದಗಳಲ್ಲಿಯೂ ಬಂದಿರುವುದನ್ನು ಪಾಠಕರು ಗಮನಿಸಿರಬಹುದು. ಪರಮಾತ್ಮನ ಸರ್ವವ್ಯಾಪಕತ್ವದ ವರ್ಣನೆ, ಅಲಂಕಾರರೂಪದಲ್ಲಿ ಈ ಮಂತ್ರದಲ್ಲಿ ಸೊಗಸಾಗಿ ವರ್ಣಿತವಾಗಿದೆ. 'ಸಹಸ್ರ' ಎಂಬ ಪದ ಕಂಡೊಡನೆಯೇ 'ಸಾವಿರ' ಎಂಬ ಅರ್ಥ ಮಾಡದೆ, 'ಸರ್ವಂ ವೈಸಹಸ್ರಂ' ಎಂಬ ಶಾಸ್ತ್ರವಾಕ್ಯವನ್ನು ಗಮನದಲ್ಲಿಟ್ಟುಕೊಂಡಲ್ಲಿ, ಈ ಮಂತ್ರದ ಅರ್ಥ ಹೀಗಾಗುತ್ತದೆ:—

"ಪರಮಾತ್ಮನು ಸರ್ವಜ್ಞನು; ಸರ್ವದ್ರಷ್ಟನು; ಸರ್ವವ್ಯಾಪಕನು; ವಿಶ್ವಕರ್ತನು. ಅವನು ಈ ಜಗತ್ತನ್ನೆಲ್ಲಾ ಆವರಿಸಿರುವುದು ಮಾತ್ರವಲ್ಲ; ನಮ್ಮ ಐದು ಜ್ಞಾನೇಂದ್ರಿಯ ಹಾಗೂ ಐದು ಕರ್ಮೇಂದ್ರಿಗಳ ಹಿಡಿತದಿಂದ ಹೊರಗೆ ನಿಂತಿದ್ದಾನೆ."

ಅಲಂಕಾರವನ್ನು ಅಲಂಕಾರವೆಂದು ಭಾವಿಸದೆ, ಶಾಬ್ದಿಕ ಅರ್ಥವನ್ನೇ ಮಾಡುತ್ತಾಹೋದರೆ, ಸಂಗತಿ ಹೊಂದುವುದಿಲ್ಲ. ಏಕೆಂದರೆ, ಸಹಸ್ರ ಮಸ್ತಕನೂ, ಸಹಸ್ರ ಬಾಹುವೂ, ಸಹಸ್ರಾಕ್ಷನೂ, ಸಹಸ್ರಪದನೂ ಆದ ಪುರುಷನು, ಎಷ್ಟೇ ದೊಡ್ಡವನೆಂದು ಭಾವಿಸಿದರೂ ಸಹ, ಆಕಾರವಂತನೇ ಆದ ಅವನು, ಎಲ್ಲೆಡೆಯಿಂದಲೂ ಭೂಮಿಯನ್ನಾವರಿಸಿ ನಿಲ್ಲುವುದು ಅಸಂಭವ. ಒಂದುವೇಳೆ, ಅವನ ಆಕಾರವು ಭೂಮಿಗಿಂತ ದೊಡ್ಡದೆಂದೂ, ಅವನ

ಹೊಟ್ಟೆ ಅಥವಾ ಇನ್ನಾವುದಾದರೂ ಒಂದು ಅಂಗದಲ್ಲಿ ಭೂಮಿ ಹುದುಗಿದೆ ಎಂದೂ ವಾದಿಸುವುದಾದಲ್ಲಿ, ಅಲ್ಲಿಗೂ ಜಗತ್ತಿನ ಬಾಹ್ಯಮುಖವನ್ನು (Surface) ಅವನು ಮುಚ್ಚಿದಂತಾಯಿತೇ ಹೊರತು ಜಗತ್ತಿನ ಅಂತರ್ಯಾಮಿ ಎಂದು ಹೇಳಿದಂತಾಗಲಿಲ್ಲ. ಸೂಕ್ಷ್ಮನಾದುದರಿಂದ, ಜಗದಂತರ್ಯಾಮಿಯೂ ಆಹುದೆಂದು ಹೇಳಿದರೆ, ಸೂಕ್ಷ್ಮನಾದ ಸರ್ವವ್ಯಾಪಿಯ ಸ್ಥೂಲಾಕಾರದ ಕಲ್ಪನೆಯೇ ಅಸಂಭವವಾಗಿ ತೋರುತ್ತದೆ. ಹಾಗಲ್ಲದೆ, "ವಿಶ್ವತಃ ಸ್ಪೃತ್ವಾ" ಅಥವಾ "ಸರ್ವತೋ ವೃತ್ವಾ" ಎಂಬಲ್ಲಿ "ಎಲ್ಲ ಕಡೆಯಿಂದಲೂ" ಎಂದು ಹೇಳಿದ್ದರೂ ಸಹ "ಹೊರಗಿನಿಂದ ಎಲ್ಲೆಡೆಯಿಂದಲೂ" ಎಂಬರ್ಥ ಮಾಡಬೇಕೇ ಹೊರತು "ಒಳಗಿನಿಂದ" ಎಂದು ಮಾಡಬಾರದು ಎಂದು ವಾದಿಸಿದರೆ–ವಿಶ್ವ, ಸರ್ವ, ಎಂಬ ಪದಗಳ ಅರ್ಥದಲ್ಲಿ ವಿಕಲ್ಪಕ್ಕೆಲ್ಲಿ ಅವಕಾಶವೆಂಬ ಪ್ರಶ್ನೆಯಜೊತೆಗೆ, ಪರಮಾತ್ಮನಿಲ್ಲದ ಸ್ಥಳದ ಕಲ್ಪನೆಯೇ ಮಾಡಬೇಕಾಗುತ್ತದೆ. ಇಂತಹ ಏಕದೇಶಿಯಾದ ಸ್ಥೂಲಾಕಾರಪರಮಾತ್ಮನನ್ನ ವರ್ಣಿಸಿ, ಕೊನೆಗವನು "ಹತ್ತು ಅಂಗುಲವನ್ನು ದಾಟಿ ನಿಂತ; "ಹತ್ತಂಗುಲಕ್ಕಿಂತ ಹೆಚ್ಚು ಉದ್ದವಾಗಿದ್ದ" ಎಂದು ಹೇಳುವ ಆವಶ್ಯಕತೆ ಏನಿತ್ತೆಂದು ಬೇರೆ ಯೋಚಿಸಬೇಕಾಗುತ್ತದೆ. ಏಕೆಂದರೆ, "ಅತ್ಯತಿಷ್ಠದ್ದಶಾಂಗುಲಂ" ಎಂಬುವಕ್ಕೆ "ಹತ್ತಂಗುಲಕ್ಕಿಂತ ದೊಡ್ಡವನಾಗಿದ್ದಾನೆ" ಎಂಬುದೇ ಶಬ್ದಾರ್ಥ.

ಆದುದರಿಂದ, ಈ ಮಂತ್ರದಲ್ಲಿಯೂ ಸರ್ವವ್ಯಾಪಕನಾದ ನಿರಾಕಾರ ಪರಮಾತ್ಮನ ಆಲಂಕಾರಿಕ ವರ್ಣನೆಯೇ ಇದೆ ಎಂಬುದು ಸ್ಪಷ್ಟವಾಗಿದೆ.

ತದೇಜತಿ ತನ್ನೈಜತಿ ತದ್ದೂರೇ ತದ್ವಂತಿಕೇ ।
ತದಂತರಸ್ಯ ಸರ್ವಸ್ಯ ತದು ಸರ್ವಸ್ಯಾಸ್ಯ ಬಾಹ್ಯತಃ ॥
[ಯಜುರ್ವೇದ. ಅಧ್ಯಾಯ-೪೦. ಮಂತ್ರ-೫.]

"ಆ ಪರಮಾತ್ಮನು ಕ್ರಿಯಾವಂತನು; ಆದರೆ ಸ್ವತಃ ನಿಶ್ಚಲನು. ಅವನು ದೂರದಲ್ಲಿದ್ದಾನೆ; ಹತ್ತಿರದಲ್ಲಿಯೂ ಇದ್ದಾನೆ. ಅವನು ಈ ಜಗತ್ತಿನ ಒಳಗಿದ್ದಾನೆ; ಅವನು ಇದರ ಹೊರಗೂ ಸಹ ಇದ್ದಾನೆ."

ಹತ್ತಿರದಲ್ಲಿಯೂ, ದೂರದಲ್ಲಿಯೂ, ಒಳಗೂ, ಹೊರಗೂ ಏಕರಸವಾಗಿ ವ್ಯಾಪಕನಾಗಿರುವ ಪರಮಾತ್ಮ ನಿರಾಕಾರನೆಂಬುದನ್ನು ಮತ್ತೆ ಹೇಳಬೇಕೇ?

ಇದೇರೀತಿ, ನೂರಾರು ಮಂತ್ರಗಳನ್ನು ಕೊಡುತ್ತಾಹೋಗಬಹುದು. ಇನ್ನು ಪರತಃಪ್ರಮಾಣಗಳಾದ ಉಪನಿಷತ್ತುಗಳ ಆದೇಶವೇನಿದೆಯೋ ನೋಡೋಣ :—

ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾಽರಸಂ-
ನಿತ್ಯಮಗಂಧವಚ್ಚಯತ್ ।
ಅನಾದ್ಯನಂತಂ ಮಹತಃ ಪರಂಧ್ರುವಂ ನಿಚಾಯ್ಯತಂ-
ಮೃತ್ಯುಮುಖಾತ್ಪ್ರಮುಚ್ಯತೇ ॥
[ಕೇನ ವಲ್ಲೀ-೩. ಶ್ಲೋಕ-೧೫.]

"ಪರಮಾತ್ಮನು ಶಬ್ದಬಾಹ್ಯನು; ಸ್ಪರ್ಶಬಾಹ್ಯನು; ನಿರಾಕಾರನು; ನಾಶರಹಿತನು; ರುಚಿಗೆ ಸಿಕ್ಕದವನು; ಶಾಶ್ವತನು; ವಾಸನೆಯಿಲ್ಲದವನು; ಅನಾದಿಯು; ಅನಂತನು; ಮಹತ್ತಿಗಿಂತ ಶ್ರೇಷ್ಠನು; ನಿಶ್ಚಲನು-ಎಂದು ತಿಳಿದಮೇಲೆಯೇ ಮೃತ್ಯುಮುಖದಿಂದ ಜೀವನು ಪಾರಾಗುವನು."

ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ ಪಶ್ಯತಿ ಕಶ್ಚನೈನಮ್ ।
ಹೃದಾ ಮನೀಷೀ ಮನಸಾಭಿಕ್ಲೃಪ್ತೋಯ ಏತದ್ವಿದುರಮೃತಾಸ್ತೇ ಭವಂತಿ ॥
[ನಾರಾಯಣ ಅಧ್ಯಾಯ-೨ ಶ್ಲೋಕ-೩.]

"ಅವನ ರೂಪವು ಎದುರಿಗೆ ನಿಲ್ಲುವುದಿಲ್ಲ. ಯಾವನೂ ಅವನನ್ನು ಕಣ್ಣಿನಿಂದ ನೋಡುವುದಿಲ್ಲ. ಹೃದಯದಿಂದ, ಬಯಕೆಯಿಂದ ಮತ್ತು ಮನದಿಂದ ಆವರಿಸಲ್ಪಡಬೇಕಾದ ತತ್ವವೇ ಪರಮಾತ್ಮನೆಂಬುವದನ್ನರಿತವರು ಮುಕ್ತರಾಗುತ್ತಾರೆ."

ದಿವ್ಯೋಹ್ಯಮೂರ್ತಃ ಪುರುಷಃ ಸ ಬಾಹ್ಯಾಭ್ಯಂತರೋ ಹ್ಯಜಃ ।
ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ ಪರತಃ ಪರಃ ॥
[ಮುಂಡಕ-೨. ಖಂಡ-೧. ಶ್ಲೋಕ-೨.]

"ಪರಮಾತ್ಮನು ದಿವ್ಯನು; ನಿರಾಕಾರನು. ಅವನು ಒಳಗೂ ಇದ್ದಾನೆ; ಹೊರಗೂ ಇದ್ದಾನೆ. ಅಜನ್ಮನಾಗಿದ್ದಾನೆ; ಅವನು ಪ್ರಾಣ-ಮನಸ್ಸುಗಳ ಬಂಧನಕ್ಕೆ ಸಿಕ್ಕುವುದಿಲ್ಲ. ಸನಾನಿಷ್ಪಾಪನು. ನಿತ್ಯನಾದ ಜೀವಾತ್ಮನಿಗಿಂತ ಶ್ರೇಷ್ಠನು."

ವೇದಾಹಮೇತಮಜರಂ ಪುರಾಣಂ ಸರ್ವಾತ್ಮಾನಂ-
ಸರ್ವಗತಂ ವಿಭುತ್ವಾತ್ ।
ಜನ್ಮನಿರೋಧಂ ಪ್ರವದಂತಿಯಸ್ಯ ಬ್ರಹ್ಮವಾದಿನೋ ಹಿ-
ಪ್ರವದಂತಿ ನಿತ್ಯಂ ॥
[ಶ್ವೇತಾಶ್ವತರ. ಅಧ್ಯಾಯ-೩. ಶ್ಲೋಕ-೨೧.]

"ಯಾವನು ಜನ್ಮಬಂಧನಮುಕ್ತನೆಂದೂ, ನಿತ್ಯನೆಂದೂ ಬ್ರಹ್ಮವಾದಿಗಳು ಹೇಳುತ್ತಾರೋ ಆ ಅಜರನೂ, ಸನಾತನನೂ, ಸರ್ವಾತ್ಮನೂ, ವಿಭುತ್ವದಿಂದ ಸರ್ವ ವ್ಯಾಪಕನೂ ಆದ ಪರಮಾತ್ಮನನ್ನು ನಾನು ಬಲ್ಲೆ."

ನಾವಿದುವರೆಗೆ, ವೇದಗಳಿಂದಲೂ ಮತ್ತು ತದನುಕೂಲ ಉಪನಿಷತ್ತುಗಳಿಂದಲೂ, "ಸ್ಥಾಲೀ ಪುಲಾಕ" ನ್ಯಾಯದಿಂದ ಹಲ ಕೆಲವು ಪ್ರಮಾಣಗಳನ್ನಿತ್ತು, ನಮ್ಮ ಮೂಲಧರ್ಮದ ಸಿದ್ಧಾಂತವೂ ಸಹ ನಿರಾಕಾರನೂ, ಸರ್ವವ್ಯಾಪಕನೂ ಆದ ಪರಮಾತ್ಮನ ಅಸ್ತಿತ್ವವನ್ನೇ ಪ್ರತಿಪಾದಿಸುತ್ತದೆಂಬುದನ್ನು ತೋರಿಸಿದ್ದೇವೆ. ಆದರೆ, ಆರ್ಷಗ್ರಂಥಗಳಲ್ಲಿದಿದ್ದರೂ ಸಹ, ಹಿಂದೂ ಬಾಂಧವರು ನಂಬುವ ಅನೇಕ ಗ್ರಂಥಗಳಿವೆ. ಅವುಗಳಲ್ಲಿ ಸಾಕಾರಪರಮಾತ್ಮನ ವರ್ಣನೆಯಿರುವುದು ಸತ್ಯವಾದರೂ ಸಹ, ನಿರಾಕಾರನಾದ ಭಗವಂತನನ್ನು ಪ್ರತಿಪಾದಿಸುವ ಪ್ರಮಾಣಗಳೂ ಬೇಕಾದಷ್ಟಿವೆ. ವಾಚಕರ ಅವಗಾಹನೆಗೆ ಇಲ್ಲಿ ಕೆಲವನ್ನು ಮಾತ್ರ ತರುತ್ತೇವೆ:-

ಏಕೋ ವ್ಯಾಪೀ ಸಮಃ ಶುದ್ಧೋ ನಿರ್ಗುಣಃ ಪ್ರಕೃತೇಃ ಪರಃ ।
ಜನ್ಮವೃದ್ಧ್ಯಾದಿರಹಿತ ಆತ್ಮಾ ಸರ್ವಗತೋಽವ್ಯಯಃ ॥೨॥
[ವಿಷ್ಣುಪುರಾಣ, ಪ್ರಥಮ ಅಧ್ಯಾಯ.]

"ಪರಮಾತ್ಮನು ಒಬ್ಬನು; ವ್ಯಾಪಕನು. ಸಮನು; ಶುದ್ಧನು; ನಿರ್ಗುಣನು. ಪ್ರಕೃತಿಗಿಂತ ಶ್ರೇಷ್ಠನು; ಜನ್ಮ ವೃದ್ಧಿ–ಮೊದಲಾದ ಗಳಿಲ್ಲದವನು; ಸರ್ವಗತನು. ಅವ್ಯಯನು."

ಅದೀರ್ಘಹ್ರಸ್ವಮಸ್ಥೂಲ ಮನಣ್ವಶ್ಯಾಮಲೋಹಿತಂ ।
ಅಸ್ನೇಹಚ್ಛಾಯಮತನು ಮಸಕ್ತಮಶರೀರಿಣಮ್ ॥

[ವಿಷ್ಣು ಪುರಾಣ. ಅಧ್ಯಾಯ–೧೪. ಶ್ಲೋಕ ೩೯]

"ಅದೀರ್ಘವು; ಅಹ್ರಸ್ವವು; ಅಸ್ಥೂಲವು; ಅಸೂಕ್ಷ್ಮವು; ಶ್ಯಾಮ ವರ್ಣವೂ ಅಲ್ಲ; ರಕ್ತ ವರ್ಣವೂ ಅಲ್ಲ. ಸ್ನೇಹ ಬಂಧನಕ್ಕೆ ಸಿಕ್ಕುವುದಿಲ್ಲ. ಚಿಕ್ಕದೂ ಅಲ್ಲ. ಸಂಗಸಹಿತವಲ್ಲ. ಶರೀರಯುಕ್ತವಾದುದಲ್ಲ. ಇದೇ ವಿಷ್ಣುವಿನ ಸ್ಥಿತಿ."

ಯನ್ನಃಶರೀರೇಷು ಯದನ್ಯದೇಹೇಷ್ವಶೇಷವಸ್ತುಷ್ವಜಮಕ್ಷಯಂಯತ್ ।
ತಸ್ಮಾಚ್ಚ ನಾನ್ಯದ್ವ್ಯತಿರಿಕ್ತಮಸ್ತಿ ಬ್ರಹ್ಮಸ್ವರೂಪಾಯ ನತಾಃ ಸ್ಮ ತಸ್ಮೈ ॥

[ವಿಷ್ಣು ಪುರಾಣ. ಅಂಶ–೩. ಅಧ್ಯಾಯ–೧೭. ಶ್ಲೋಕ–೩೩]

"ಯಾವುದು ನಮ್ಮ ಶರೀರದಲ್ಲಿಯೂ, ಬೇರೆ ಶರೀರಗಳಲ್ಲಿಯೂ, ನಿಖಿಳ ವಸ್ತುಗಳಲ್ಲಿಯೂ ವ್ಯಾಪ್ತವಾಗಿದೆಯೋ, ಯಾವುದರಿಂದ ಹೊರಗೆ ಯಾವ ವಸ್ತುವೂ ಇಲ್ಲವೋ ಆ ಅಕ್ಷಯನಾದ ಬ್ರಹ್ಮನಿಗೆ ನಮಸ್ಕರಿಸುತ್ತೇವೆ."

ಸರ್ವತ್ರಾಸೌ ಸಮಶ್ಚಾಪಿ ವಸನ್ನ ನುಪಮೋ ಮತಃ ॥
ಭಾವಯನ್ ಬ್ರಹ್ಮರೂಪೇಣ ವಿದ್ವದ್ಭಿಃ ಪರಿಪಠ್ಯತೇ ॥

[ಪದ್ಮಪುರಾಣ, ಸೃಷ್ಟಿಖಂಡ, ಅಧ್ಯಾಯ–೨. ಶ್ಲೋಕ–೮೭.]

"ಅವನು ಏಕರಸನಾಗಿ ಎಲ್ಲೆಡೆಯೂ ವ್ಯಾಪಿಸಿರುವನು; ಮತ್ತು ಅನುಪಮನು. ಬ್ರಹ್ಮಜ್ಞರಾದ ವಿದ್ವಾಂಸರು ಹೀಗೆಯೇ ಹೇಳುತ್ತಾರೆ."

ಅಚಕ್ಷುರಪಿ ಯಃ ಪಶ್ಯತ್ಯಕರ್ಣೋಽಪಿ ಶೃಣೋತಿ ಯಃ ।
ಸರ್ವಂ ವೇತ್ತಿ ನ ವೇತ್ತಾಽಸ್ಯ ತಮಾಹುಃ ಪುರುಷಂ ಪರಮ್ ॥

[ಶಿವಪುರಾಣ ವಾಯುಸಂಹಿತಾ, ಅಧ್ಯಾಯ–೪. ಶ್ಲೋಕ–೮೭.]

"ಯಾವನು ಕಣ್ಣಿಲ್ಲದಿದ್ದರೂ ನೋಡುತ್ತಾನೋ, ಕಿವಿಯಿಲ್ಲದಿದ್ದರೂ ಕೇಳುತ್ತಾನೋ, ಅವನು ಎಲ್ಲವನ್ನೂ ತಿಳಿಯುತ್ತಾನೆ. ಆದರೆ, ಅವನನ್ನು ತಿಳಿದವರು ಯಾರೂ ಇಲ್ಲ. ಅವನನ್ನೇ ಪರಮಪುರುಷನೆನ್ನುತ್ತಾರೆ."

ನಾವು ಇದೇರೀತಿ ಅಸಂಖ್ಯಶ್ಲೋಕಗಳನ್ನು ಉದ್ಧರಿಸುತ್ತಾ ಹೋಗಬಹುದು. ಆದರೆ—ವ್ಯಾಪೀ, ಸರ್ವಗತ, ಶುದ್ಧ, ಅಜ, ಅಕ್ಷಯ, ಅಚಕ್ಷು, ಅಕರ್ಣ—ಈ ಮೊದಲಾದ ಶಬ್ದಗಳನ್ನು ಕುರಿತು ಗಂಭೀರವಾಗಿ ಯೋಚಿಸಬೇಕೆಂದು ಮಾತ್ರ ಪ್ರಾರ್ಥಿಸಿ, ಈ ಪ್ರಸಂಗವನ್ನಿಲ್ಲಗೇ ನಿಲ್ಲಿಸುತ್ತೇವೆ.

ಕೊನೆಯಲ್ಲಿ, ಪಾಠಕರು ಈ ಕೆಳಗಿನದೊಂದು ಶ್ಲೋಕವನ್ನೂ ಓದಿ ಮನನಮಾಡಲಿ :—

ನಿರ್ಗುಣಸ್ಯ ಮುನೇ ರೂಪಂ ನ ಭವೇದ್ದೃಷ್ಟಿಗೋಚರಂ ।
ದೃಶ್ಯಂಚ ನಶ್ವರಂ ಯಸ್ಮಾದರೂಪಂ ದೃಶ್ಯತೇ ಕಥಂ ॥
[ದೇವೀಭಾಗವತ. ಸ್ಕಂಧ—೩ ಅಧ್ಯಾಯ—೭. ಶ್ಲೋಕ—೮]

"ಮುನಿಯೇ ! ನಿರ್ಗುಣನಾದ ಪರಮಾತ್ಮನರೂಪ ಕಣ್ಣಿಗೆಂದೂ ಕಾಣಿಸುವುದಿಲ್ಲ. ಕಣ್ಣಿಗೆಕಾಣುವುದೆಲ್ಲಾ ನಶ್ವರ. ನಿರಾಕಾರವಾದುದು ಹೇಗೆ ಕಾಣಿಸಬಲ್ಲದು ?"

ಪರಮಾತ್ಮನು ನಿಸ್ಸಂದೇಹವಾಗಿ ನಿರಾಕಾರನೆಂಬುದು ಇದರಿಂದ ಎಷ್ಟು ಸ್ಪಷ್ಟವಾಗಿ ವ್ಯಕ್ತವಾಗುತ್ತಿದೆ ?

ಆದರೆ, ಶಾಸ್ತ್ರೀದೃಷ್ಟಿಯವಾದ ಇಲ್ಲಿಗೇ ಮುಗಿಯುವುದಿಲ್ಲ. ಸಾಕಾರವಾದಿಗಳೂ ಸಹ, ಭಗವಂತನ ನಿರಾಕಾರತ್ವವನ್ನೇನೂ ತಿರಸ್ಕರಿಸುವುದಿಲ್ಲ. ಅದನ್ನು ಅವರೂ ಒಪ್ಪುತ್ತಾರೆ. ಆದರೆ, ಒಂದು ಹೆಜ್ಜೆ ಮುಂದೆಹೋಗಿ "ಏಕಂ ಸದ್ವಿಪ್ರಾಬಹುಧಾ ವದಂತಿ" ಎಂಬ ಶ್ರುತಿವಚನದ ನೆರಳಿನಲ್ಲಿ ತಮ್ಮ ಮೂರ್ತಿಪೂಜೆಯನ್ನು ಸ್ಥಾಪಿಸಲು ಯತ್ನಿರುತ್ತಾರೆ. "ಪರಮಾತ್ಮನೇನೋ ಒಬ್ಬನೇ. ಆದರೆ, ಜ್ಞಾನಿಗಳು ಅವನನ್ನು ನಾನಾವಿಧವಾದ ಹೆಸರುಗಳಿಂದ ಕರೆಯುತ್ತಾರೆ" ಎಂಬುದು ವೇದಮಂತ್ರದ ಅರ್ಥ. "ಅನೇಕ ಹೆಸರುಗಳಿಂದ

ಕರೆಯಬೇಕಾದರೆ, ಅನೇಕ ರೂಪಗಳ ಕಲ್ಪನೆಯೂ ಆವಶ್ಯಕ. 'ತಾಯಿ' ಎನ್ನಬೇಕಾದರೆ ಭಗವಂತ ಸ್ತ್ರೀರೂಪದಲ್ಲಿರಬೇಕು. 'ತಂದೆ' ಎಂದು ಕರೆಯ ಬೇಕಾದರೆ ಪುರುಷರೂಪದಲ್ಲಿರಬೇಕು, ಇದೇರೀತಿ, ಒಂದೊಂದು ಹೆಸರಿಗೂ ಒಂದೊಂದು ರೂಪ, ಅಥವಾ ಆಕಾರ ಕಾವ್ಯ. ಆದುದರಿಂದ, ಇಷ್ಟೆಲ್ಲಾ ಮೂರ್ತಿಗಳ ರೂಪದಲ್ಲಿಯಾದರೂ ನಾವು ಪೂಜಿಸುವುದು ಒಬ್ಬನೇ ಒಬ್ಬ ಪರಮಾತ್ಮನನ್ನು"–ಎಂಬುದು ಸಾಕಾರೇಶ್ವರ ವಾದಿಗಳ ಸಿದ್ಧಾಂತ.

ಆದರೆ, ನಾವು ಮಾಡುವ ಕಾರ್ಯವನ್ನು ಅಥವಾ ನಮ್ಮ ಗುಣವನ್ನು ಅನುಸರಿಸಿ, ನಮ್ಮನ್ನು 'ಉಪಾಧ್ಯಾಯ, ವೈದ್ಯ, ಗುಮಾಸ್ತ, ಪ್ರಚಾರಕ, ಇಲ್ಲವೇ ಶಾಂತ, ಹಸನ್ಮುಖಿ, ಕ್ರೂರ, ಅಳುಬುರುಕ—ಎಂದು ಮುಂತಾಗಿ ಹೆಸರಿಡುವುದಕ್ಕೂ, ಸುಮ್ಮನೇ ನಮ್ಮನ್ನು "ಕೋಳಿ, ನಾಯಿ, ಬೆಕ್ಕು" ಎಂದು ಮುಂತಾಗಿ ಕರೆಯುವುದಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಗುಣ ಬೋಧಕಗಳಾದ ನಾಮಪದಗಳಿಗೆ ಆಕಾರದ ಆವಶ್ಯಕತೆಯಿಲ್ಲವೆಂಬುದನ್ನೂ ಮರೆಯಬಾರದು. ಪರಮಾತ್ಮನ ಗುಣ ಕರ್ಮಸ್ವಭಾವಾನುಸಾರ ಅವನಿಗೆ ಅಸಂಖ್ಯ ನಾಮಗಳಿರಬಹುದಾದರೂ, ಅವನ ಆಕಾರಕಲ್ಪನೆ ಅಸಂಭವ. ದೇವರನ್ನು ತಂದೆ, ತಾಯಿ ಎಂದು ಕರೆದಮಾತ್ರಕ್ಕೆ ಅವನು ಗಂಡು ಅಥವಾ ಹೆಣ್ಣಾಗಿ ರೂಪತಾಳುತ್ತಾನೆಂದು ಅರ್ಥವಲ್ಲ; ತಂದೆಯಂತೆ ಅಥವಾ ತಾಯಿ ಯಂತೆ ರಕ್ಷಕನಾಗಿದ್ದಾನೆಂಬುದೇ ಭಾವನೆ, ಪರಮಾತ್ಮನ ಆಕಾರ ಕಲ್ಪನೆ ಅಸಂಭವವೆಂಬುದನ್ನು ಹಿಂದೆ ವೈಜ್ಞಾನಿಕವಾಗಿ ಪ್ರತಿಪಾದಿಸಿದ್ದೇವೆ.

ಇನ್ನು, ವೇದಾದಿಸತ್ಯಶಾಸ್ತ್ರಗಳಲ್ಲಿ ಮೂರ್ತಿಪೂಜಾ ನಿಷೇಧವಿದೆಯೇ– ಎಂಬುದೊಂದು ಪ್ರಶ್ನೆ. ಅರ್ಥಾಪತ್ತಿ ಪ್ರಮಾಣದಿಂದ, ವೇದಗಳಲ್ಲಿ ಜಡ ಪೂಜ ನಿಷೇಧವಿದ್ದೇ ಇದೆ. ಈ ವೇದಮಂತ್ರವನ್ನೇ ನೋಡೋಣ :—

ನ ತಸ್ಯ ಪ್ರತಿಮಾ ಅಸ್ತಿ ಯಸ್ಯನಾಮ ಮಹದ್ಯಶಃ ।
ಹಿರಣ್ಯಗರ್ಭ ಇತ್ಯೇಷ ಮಾಮಾ ಹಿಂಸೀದಿತ್ಯೇಷ
ಯಸ್ಮಾನ್ನಜಾತ ಇತ್ಯೇಷಃ ॥

[ಯಜುರ್ವೇದ. ಅಧ್ಯಾಯ–೩೨. ಮಂತ್ರ–೩.]

"ಹಿರಣ್ಯಗರ್ಭ, ಮಾಮಾ ಹಿಂಸೀತ್, ಯಸ್ಮಾನ್ನ ಜಾತಃ" ಎಂದಾರಂಭ ವಾಗುವ ಸೂಕ್ತಗಳಲ್ಲಿ ವರ್ಣಿತನಾದ ಮಹಮ್ಯಶೋವಂತನೂ, ಖ್ಯಾತನಾ ಮನೂ ಆದ ಪರಮಾತ್ಮನನ್ನು ಆಕೃತಿಮಾಡುವ ಸಾಧನವಾವುದೂ ಇಲ್ಲ ; ಅವನಿಗೆ ಸಮನಾದುದು ಯಾವುದೂ ಇಲ್ಲ."

ಅವನ ಪ್ರತಿಮಾನವೇ ಯಾವುದೂ ಇಲ್ಲವೆಂದಮೇಲೆ, ಅವನ ಮೂರ್ತಿ ರಚನೆ ಹೇಗೆ? ಮೂರ್ತಿರಚನೆಯೇ ಸಾಧ್ಯವಿಲ್ಲದಮೇಲೆ ಮೂರ್ತಿಪೂಜೆ ಹೇಗೆ ನಡೆಯಬಲ್ಲದು ? ವೈದಿಕಯುಗದಲ್ಲಿ ಮೂರ್ತಿಪೂಜಾವಿಧಾನವೇ ಇರಲಿಲ್ಲ ವಾದುದರಿಂದ ತತ್ಕಾಲೀನ ಶಾಸ್ತ್ರಗ್ರಂಥಗಳಲ್ಲಿ ಅದರ ಖಂಡನೆಯೂ ಸ್ಪಷ್ಟ ವಾದ ಮಾತುಗಳಲ್ಲಿ ಇಲ್ಲವೆಂದರ ಆಶ್ಚರ್ಯಪಡಬೇಕಾಗಿಲ್ಲ. ಆದರೆ, ವೇದಗಳಲ್ಲಿ, ಸ್ಫುಟವಾಗಿ ಪರಮಾತ್ಮನ ಸ್ವರೂಪವನ್ನು ಬಣ್ಣಿಸಿ, ಉಪಾಸನಾ ಕ್ರಮವನ್ನು ಹೇಳಿರುವಾಗ, ನಾವು "ವೇದಗಳಲ್ಲಿ ಸ್ಪಷ್ಟವಾಗಿ ಮೂರ್ತಿ ಪೂಜೆ ಮಾಡಬೇಡ ಎಂದು ಹೇಳಿಲ್ಲವಲ್ಲ." ಎಂದು ತರ್ಕಿಸುವುದು ಅನಾವಶ್ಯಕ.

ಮೂರ್ತಿಪೂಜೆ ಹಿಂದೂಸಮಾಜದಲ್ಲಿ ಕಾಲಿಟ್ಟುದು ಪುರಾಣಯುಗದಲ್ಲಿ. ಆದುದರಿಂದಲೇ ಪುರಾಣಗಳಲ್ಲಿ ಮೂರ್ತಿಪೂಜೆಗೆ ಆಧಾರ ಸಿಕ್ಕುತ್ತದೆ. ಮಾತ್ರವಲ್ಲ, ಕೆಲವುಕಡೆ ಅತ್ಯುಗ್ರವಾದ ಖಂಡನೆಯೂ ಸಹ ಕಂಡು ಬರುತ್ತದೆ. ಉದಾಹರಣೆಗೆ, ಈ ಕೆಳಗಿನ ಪ್ರಮಾಣಗಳೇ ಸಾಕು.

ಯೋ ಮಾಂ ಸರ್ವೇಷು ಭೂತೇಷು ಸಂತಮಾತ್ಮಾನಮೀಶ್ವರಂ ।
ಹಿತ್ವಾರ್ಚಾಂ ಭಜತೇ ಮೌಢ್ಯಾದ್ಭಸ್ಮನ್ಯೇವ ಜುಹೋತಿ ಸಃ॥
[ಭಾಗವತ. ಸ್ಕಂಧ-೩. ಅಧ್ಯಾಯ-೨೯. ಶ್ಲೋಕ-೨೪.]

"ಯಾವನು ಸರ್ವಭೂತಗಳಲ್ಲಿಯೂ ಇರುವ ಈಶ್ವರನೂ, ಆತ್ಮನೂ ಆದ ನನ್ನನ್ನು ಬಿಟ್ಟು, ಮೂರ್ತ್ಯರ್ಚನೆಯಲ್ಲಿ ಮೌಢ್ಯದಿಂದ ನಿರತನಾಗುತ್ತಾನೋ ಅವನು ಬೂದಿಯಲ್ಲಿ ಹೋಮಮಾಡುತ್ತಾನೆ.

ಯಸ್ಯಾತ್ಮ ಬುದ್ಧಿಃ ಕುಣಪೇ ತ್ರಿಧಾತುಕೇ ಸ್ವಧೀಃ ಕಲತ್ರಾದಿಷು –

ಭೌಮ ಇಜ್ಯಧೀಃ ।
ಯಸ್ತೀರ್ಥಬುದ್ಧಿಃ ಸಲಿಲೇನ ಕರ್ಹಿಚಿಜ್ಜನೇಷ್ವ ಭಿಜ್ಞೇಷು ಸ-
ಏವ ಗೋಖರಃ ॥

[ಶ್ರೀಮದ್ಭಾಗವತ. ಸ್ಕಂಧ-೧೦. ಅಧ್ಯಾಯ-೨೪. ಶ್ಲೋಕ-೧೩.]

"ಯಾವನು ಶರೀರವನ್ನೇ ಆತ್ಮವೆಂದೂ, ಪತ್ನ್ಯಾದಿಗಳೇ ತನ್ನವರೆಂದೂ, ಮೂರ್ತಿಪೂಜೆಯೇ ಉಪಾಸನೆಯೆಂದೂ, ನೀರೇ ತೀರ್ಥವೆಂದೂ ಭಾವಿಸುತ್ತಾನೋ, ಅವನು ವಿದ್ವಜ್ಜನರ ನಡುವೆ, ಗೋವುಗಳನಡುವೆ ಕತ್ತೆಯಿರುವಂತೆ ಇರುತ್ತಾನೆ".

ಇನ್ನು ಶಂಕರಭಗವತ್ಪಾದರ ಈ ಶ್ಲೋಕಗಳಿಂದಲೂ ಮನೋರಂಜನೆಯಾಗುವುದರಲ್ಲಿ ಸಂದೇಹವಿಲ್ಲ:—

ಪೂರ್ಣಸ್ಯಾವಾಹನಂ ಕುತ್ರ ಸರ್ವಾಧಾರಸ್ಯಚಾಸನಂ ।
ಸ್ವಚ್ಛಸ್ಯ ಪಾದ್ಯಮರ್ಘಂಚ ಶುದ್ಧ ಸ್ಯಾಚಮನಂ ಕುತಃ ॥
ನಿರ್ಮಲಸ್ಯ ಕುತಃಸ್ನಾನಂ ವಸ್ತ್ರಂ ವಿಶ್ವೋದರಸ್ಯಚ ।
ನಿರಾಲಂಬಸ್ಯೋಪವೀತಂ ರಮ್ಯಸ್ಯಾಭರಣಂ ಕುತಃ ॥
ಸ್ವಯಂಪ್ರಕಾಶಮಾನಸ್ಯ ಕುತೋ ನೀರಾಜನೋವಿಧಿಃ ।
ಪ್ರದಕ್ಷಿಣಂ ಹ್ಯನಂತಸ್ಯ ಚಾದ್ವಿತೀಯಸ್ಯ ಕಾ ನತಿಃ ॥
ಅಂತರ್ಬಹಿಶ್ಚಪೂರ್ಣಸ್ಯ ಕಥಮುದ್ವಾಸನಂ ಭವೇತ್ ।

[ಶಂಕರಕೃತ "ಪರಾಪೂಜಾ"]

"ಪೂರ್ಣನಾದ ಪರಮಾತ್ಮನ ಆವಾಹನೆ ಹೇಗೆ ಸಾಧ್ಯ? ಸರ್ವಾಧಾರನಿಗೆ ಆಸನವೆಲ್ಲಿ ? ಸ್ವಚ್ಛನಾದ ದೇವನಿಗೆ ಪಾದ್ಯ-ಅರ್ಘಗಳೇಕೆ? ಶುದ್ಧನಿಗೆ ಆಚಮನದ ಅವಶ್ಯಕತೆ ಏನು? ನಿರ್ಮಲನಿಗೆ ಸ್ನಾನವೆಲ್ಲಿ ? ವಿಶ್ವೋದರನಿಗೆ ವಸ್ತ್ರವೆಂತು ? ನಿರಾಲಂಬನಿಗೆ ಉಪವೀತವೆಂತಹುದು ? ಸುಂದರನಾದ ದೇವನಿಗೆ ಅಭರಣವೆತ್ತಣದು? ಸ್ವಯಂಪ್ರಕಾಶಮಾನನಾದ ಜಗದೀಶ್ವರನಿಗೆ ದೀಪವೇತಕ್ಕೆ ? ಅನಂತನ ಪ್ರದಕ್ಷಿಣೆಗೇನರ್ಥ ? ಅದ್ವಿತೀಯನಿಗೆ ಬಾಗುವು

ದೆಂದರೇನು? ಒಳಗೂ-ಹೊರಗೂ ವ್ಯಾಪಕನಾಗಿರುವವನಿಗೆ—ಉದ್ವಾಸನ ಅಂದರೆ ವಿಸರ್ಜನವಿಧಿ ಹೇಗೆ ಹೊಂದುವುದು?

ಇನ್ನು ಶ್ರೀಮನ್ಮಧ್ವಾಚಾರ್ಯರ ಗ್ರಂಥಗಳಿಂದ ಆರಿಸಿದ ಈ ಕೆಳಕಂಡ ಶ್ಲೋಕಗಳನ್ನು ಸ್ವಲ್ಪ ಓದೋಣ:—

ಅಗ್ನೌ ಕ್ರಿಯಾವತಾಂ ವಿಷ್ಣುಃ ಯೋಗಿನಾಂ ಹೃದಯೇ ಹರಿಃ ।
ಪ್ರತಿಮಾ ಸ್ವಪ್ರಬುದ್ಧಾನಾಂ ಸರ್ವತ್ರ ವಿದಿತಾತ್ಮನಾಂ ॥

[ಬ್ರಹ್ಮ ಸೂತ್ರಭಾಷ್ಯ. ಅಧ್ಯಾಯ-೧. ಪಾದ-೧. ೩೧ನೇಯ ಸೂತ್ರದ ಭಾಷ್ಯ]

"ಕ್ರಿಯಾವಂತರಿಗೆ ಭಗವಂತನು ಬೆಂಕಿಯಲ್ಲಿದ್ದಾನೆ; ಯೋಗಿಗಳಿಗೆ ಹೃದಯದಲ್ಲಿದ್ದಾನೆ; ಮೂರ್ಖರಿಗೆ ಪ್ರತಿಮೆಯಲ್ಲಿದ್ದಾನೆ. ಆತ್ಮಜ್ಞರಿಗೆ ಎಲ್ಲೆಡೆಯೂ ಇದ್ದಾನೆ."

ಶ್ರೀಮನ್ಮಧ್ವಾಚಾರ್ಯರು, ಮೂರ್ಖರಪಾಲಿಗೆ ಮೂರ್ತಿ-ಪೂಜೆ ಆವಶ್ಯಕ ವೆಂದು ಭಾವಿಸುತ್ತಿದ್ದರೆಂದು ಈ ಶ್ಲೋಕದಿಂದ ವ್ಯಕ್ತವಾಗುವ್ರದಾದರೂ, ವಿಗ್ರಹಾರಾಧಕರು 'ಅಪ್ರಬುದ್ಧ' ರೆಂಬ ತತ್ವವನ್ನು ಅವರೂ ಒಪ್ಪಿದಂತಾ ಯಿತು. ಈಗ ಒಂದು ಹೆಜ್ಜೆ ಮುಂದೆ ಹೋಗೋಣ:—

ತಾರತಮ್ಯಂ ಚ ಮುಕ್ತಾನಾಂ ಸಾಧನಾನಾಂಚ ದೃಶ್ಯತೇ ।
ಸಾಧ್ಯಸಾಧನವೈರೂಪ್ಯಂ ಅದೃಷ್ಟಂ ಕೇನಕಲ್ಪ್ಯತೇ ॥

[ಅನುವ್ಯಾಖ್ಯಾನ. ಅಧ್ಯಾಯ-೩. ಪಾದ-೪, ಶ್ಲೋಕ-೮೯.]

"ಮುಕ್ತರುಗಳಲ್ಲಿಯೂ, ಸಾಧನಗಳಲ್ಲಿಯೂ ತಾರತಮ್ಯ ಕಂಡು ಬರುತ್ತದೆ. ಸಾಧ್ಯ ಒಂದು ಬಗೆ; ಸಾಧನಬಗೆ—ಎಂಬ ವೈರೂಪ್ಯವನ್ನು ಕಲ್ಪಿಸಲೆಂತು ಸಾಧ್ಯ?"

ಮಧ್ವಗುರುರಾಯರೂ ಉತ್ತಮ ಸಾಧನದಿಂದಲೇ ಉತ್ತಮ ಸಿದ್ಧಿ ಯಾಗುವ್ರದೆಂಬುದನ್ನು ಒಪ್ಪುತ್ತಿದ್ದರೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಈಗ ಅವರ "ಪ್ರತಿಮಾ ಸ್ವಪ್ರಬುದ್ಧಾನಾಂ" ಎಂಬ ಕಥನವನ್ನೇ ತೆಗೆದುಕೊಳ್ಳೋಣ : ಅಪ್ರಬುದ್ಧರು ಅಂದರೆ, ಅಜ್ಞಾನಿಗಳು ಮೂರ್ತಿಗಳನ್ನು ಸಾಧನವಾಗಿ ಅಂಗೀಕರಿಸುತ್ತಾರೆಂದು ಹೇಳಿದರು, ಆ ಸಾಧನವೂ ಅಜ್ಞಾನಯುಕ್ತವಾದುದೇ ಎಂದು ಹೇಳಿ ದಂತಾಯಿತು. ಈ ಸಾಧನಗ್ರಹಣದ ಫಲವೇನು? ಶ್ರೀಮನ್ಮಧ್ವರೇ ಉತ್ತರಕೊಟ್ಟಿದ್ದಾರೆ :—

ನಹಿ ಜ್ಞಾನಂ ವಿನಾಕ್ವಾಪಿ ಫಲಸ್ಯಾಕ್ಷಯತಾ ಭವೇತ್ ।

[ಅನುವ್ಯಾಖ್ಯಾನ, ಅಧ್ಯಾಯ-೩. ಪಾದ-೪. ಶ್ಲೋಕ-೨೦೭.]

"ಜ್ಞಾನವಿಲ್ಲದೆ ಎಂದಿಗೂ ಅಕ್ಷಯವಾದ ಫಲ ಲಭಿಸಲಾರದು." ಅಪ್ರಬುದ್ಧ ಅಂದರೆ ಅಜ್ಞಾನಿಗಳಿಗೆ ಜ್ಞಾನವೆಲ್ಲಿ? ಇನ್ನು ಆ ಜ್ಞಾನರಹಿತಸ್ಥಿತಿಯಲ್ಲಿನ ಸಾಧನವಾದ ಮೂರ್ತಿಪೂಜೆಯಿಂದ ಅಕ್ಷಯಫಲ ಹೇಗೆ ಸಿಕ್ಕಬೇಕು? ಜ್ಞಾನವಿಲ್ಲದ ಭಕ್ತಿಯನ್ನೂ ಮಧ್ವರೊಪ್ಪುವುದಿಲ್ಲ. ಅದರೇ ಹೇಳುತ್ತಾರೆ:–

ಜ್ಞಾನಸ್ಯೈವ ವಿಶೇಷೋ ಯದ್ಭಕ್ತಿರಿತ್ಯಭಿಧೀಯತೇ ।

[ಅನುವ್ಯಾಖ್ಯಾನ, ಅಧ್ಯಾಯ-೩. ಪಾದ-೪. ಶ್ಲೋಕ-೨೧೪.]

"ಜ್ಞಾನವಿಶೇಷಕ್ಕೇ ಭಕ್ತಿಯೆಂದು ಹೆಸರು."

ಅವಿದ್ವಾನ್ ಬಹುಕರ್ಮಾಪಿ ಹ್ಯಂತವತ್ಫಲಮಾಪ್ನುಯಾತ್ ।

[ಅನುವ್ಯಾಖ್ಯಾನ. ಅಧ್ಯಾಯ-೩. ಪಾದ-೪. ಶ್ಲೋಕ-೨೦೭.]

"ಅವಿದ್ವಾಂಸನು ಎಷ್ಟು ಕೆಲಸಮಾಡಿದರೂ ಅಂತಯುಕ್ತವಾದ ಫಲವನ್ನೇ ಹೊಂದುತ್ತಾನೆ". ಅಂದಮೇಲೆ, ಮಧ್ವಸಿದ್ಧಾಂತದಲ್ಲಿ ಮೂರ್ತಿಪೂಜೆಯ ಸ್ಥಾನವಾವುದೆಂಬುದನ್ನು ಪಾಠಕರೇ ಯೋಚಿಸಬಹುದು.

ಹಾಗಾದರೆ, ವೇದಾನುಸಾರ, ಪರಮಾತ್ಮಪ್ರಾಪ್ತಿಯ ಸಾಧನವಾವುದು? ಈ ಜನ್ಮಮೃತ್ಯುಬಂಧನದ ವಿಮೋಚನೆಯ ದಾರಿಯಾವುದು? ವೇದದ ಮಾತುಗಳಲ್ಲಿಯೇ ಉತ್ತರ ಕೊಡುತ್ತೇವೆ :—

ಉಲೂಕಯಾತುಂ ಶುಶುಲೂಕಯಾತುಂ ಜಹಿ ಶ್ವಯಾತು-
ಮುತಕೋಕಯಾತುಮ್ ।

ಸುಪರ್ಣಯಾತುಮುತ ಗೃಧ್ರಯಾತುಂ ದೃಷದೇವಪ್ರಮೃಣ
ರಕ್ಷ ಇಂದ್ರ ॥
[ಅಥರ್ವವೇದ. ಕಾಂಡ-೮. ಸೂಕ್ತ-೪. ಮಂತ್ರ-೨೨.]

ಅರ್ಥ :—ಹೇ ಜೀವಾತ್ಮನೇ ! ಗೂಗೆಯನಡೆ–ಅಂದರೆ ತಮೋಗುಣ ಜನ್ಯವಾದ ಅಂಧಕಾರ ಪ್ರಿಯತೆಯನ್ನು, ತೋಳನ ನಡೆ–ಅಂದರೆ ಕ್ರೌರ್ಯ ಹಾಗೂ ಅತಿಭಕ್ಷಣವನ್ನೂ, ನಾಯಿಯ ನಡೆ–ಅಂದರೆ ದೈನ್ಯವನ್ನೂ, ಚಕ್ರವಾಕದ ನಡೆ-ಅಂದರೆ ಅತಿಕಾಮವನ್ನೂ, ಗರುಡನ ನಡೆ-ಅಂದರೆ ಅಹಂಕಾರವನ್ನೂ, ಹದ್ದಿನ ನಡೆ-ಅಂದರೆ ಲೋಭವನ್ನೂ ನಿರ್ನಾಮಮಾಡು. ಪ್ರಬಲವಾದ ಸಾಧನಗಳಿಂದ ಈ ದುರ್ಗುಣಗಳನ್ನೆಲ್ಲಾ ಮರ್ದಿಸು.

ಅಗ್ನೇ ವ್ರತಪತೇ ವ್ರತಂ ಚರಿಷ್ಯಾಮಿ ತಚ್ಛಕೇಯಮ್ ।
ತನ್ಮೇ ರಾಧ್ಯತಾಮಿದಮಹಮನೃತಾತ್ಸತ್ಯಮುಪೈಮಿ ॥
[ಯಜುಃ, ಅ-೧. ಮಂ-೫.]

"ವ್ರತಾಧೀಶ್ವರ ಪರಮಾತ್ಮ ! ನಾನೊಂದು ವ್ರತ ಧರಿಸುತ್ತೇನೆ. ಅದನ್ನು ನಿರ್ವಹಿಸುವ ಶಕ್ತಿಯನ್ನು ನನಗೆ ಕೊಡು. ಅದು ಪೂರ್ಣವಾಗಲಿ. ನಾನು ಅನೃತವನ್ನು ಬಿಟ್ಟು, ಸತ್ಯದ ಕಡೆ ನಡೆಯುತ್ತೇನೆಂಬುದೇ ಆ ವ್ರತ".

ವೈಶ್ವದೇವೀಂ ವರ್ಚಸ ಆರಭಧ್ವಂ ಶುದ್ಧಾ ಭವಂತಃ ಶುಚಯಃ ಪಾವಕಾಃ ।
ಅತಿಕ್ರಾಮಂತೋ ದುರಿತಾ ಪದಾನಿ ಶತಂ ಹಿಮಾಃ ಸರ್ವವೀರಾ ಮದೇಮ ॥
[ಅಥರ್ವವೇದ, ಕಾಂಡ-೧೨. ಸೂಕ್ತ-೩. ಮಂತ್ರ ೨೮.]

"ತೇಜಃಪ್ರಾಪ್ತಿಗಾಗಿ ಪರಮಾತ್ಮನ ಕಾಂತಿಯನ್ನು ಅವಲಂಬಿಸಿರಿ. ಆ ದಾರಿ ಯಾವುದೆಂದರೆ–ಕಾಯೇನ ವಾಚಾಮನಸಾ ನಿಷ್ಪಾಪರಾಗಬೇಕು ; ಶುಚಿರ್ಭೂತರಾಗಿ, ಬೇರೆ ಯವರನ್ನೂ ಪವಿತ್ರಗೊಳಿಸಬೇಕು ; ದುಷ್ಟಗುಣಗಳೆಲ್ಲವನ್ನೂ ವೀರರಂತೆ ತುಳಿದು ಮುಂದರಿಯಬೇಕು. ಹೀಗೆಮಾಡಿದಲ್ಲಿ, ಪೂರ್ಣಾಯುಗಳಾಗಿ ಆನಂದಹೊಂದುವೆವು."

ಯೇ ಸಮಾನಾಃ ಸಮನಸೋ ಜೀವಾ ಜೀವೇಷು ಮಾಮಕಾಃ ।

ತೇಷಾಂ ಶ್ರೀರ್ಮಯಿ ಕಲ್ಪತಾಮಸ್ಮಿಂಲ್ಲೋಕೇ ಶತಂ ಸಮಾಃ ॥

[ಯಜುರ್ವೇದ. ಅಧ್ಯಾಯ-೧೯, ಮಂತ್ರ-೪೬.]

"ಯಾವ ಮಹಾತ್ಮರು ಮನಸ್ವಿಗಳೂ ಸರ್ವಸಮದರ್ಶಿಗಳೂ, ಜೀವ ಮಾತ್ರರೆಲ್ಲಾ ನನ್ನವರೆಂಬ ಭಾವನೆಹೊಂದಿದವರೂ ಆಗಿರುತ್ತಾರೋ, ಅಂತಹವರ ಸಂಪತ್ತು ನನ್ನಲ್ಲಿ ಉಂಟಾಗಲಿ."

ಈಶಾ ವಾಸ್ಯಮಿದಂ ಸರ್ವಂ ಯತ್ಕಿಂಚ ಜಗತ್ಯಾಂ ಜಗತ್ ।
ತೇನ ತ್ಯಕ್ತೇನ ಭುಂಜೀ ಥಾ ಮಾಗೃಧಃ ಕಸ್ಯಸ್ವಿದ್ಧನಮ್ ॥

[ಯಜುರ್ವೇದ. ಅಧ್ಯಾಯ-೪೦, ಮಂತ್ರ-೧.]

"ಈ ಜಗತ್ತಿನಲ್ಲಿರುವ ಸರ್ವಸ್ವವೂ ಪರಮಾತ್ಮನವಾಸಸ್ಥಾನ. ದುರಾಶೆ ಪಡದೆ, ಅವನಿತ್ತುದನ್ನನುಭವಿಸು. ಹಣವು ಯಾರದು ?"

ಈ ಮೇಲ್ಕಂಡ ಮಂತ್ರಗಳು ಬಣ್ಣಿಸುವಂತೆ, ನಮ್ಮಲ್ಲಿ ಸತ್ಯ, ಪವಿತ್ರತೆ, ಸರ್ವಸಮದೃಷ್ಟಿ, ದಯೆ, ನಿರ್ಲೋಭತ್ವ—ಮೊದಲಾದ ಸದ್ಗುಣಗಳನ್ನು ವರ್ಧಿಸುತ್ತಾಹೋದರೆ, ನಮಗೆ ಪರಮಾತ್ಮನಲ್ಲಿ ನಿಜವಾದ ಭಕ್ತಿ ಹುಟ್ಟುತ್ತದೆ. ಆಗಲೇ ಈಶ್ವರಸಾಕ್ಷಾತ್ಕಾರ ಸಾಧ್ಯ.

ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ।
ನಾಶಾಂತಮಾನಸೋವಾಽಪಿ ಪ್ರಜ್ಞಾನೇನೈನಮಾಪ್ನುಯಾತ್ ॥

[ಕೇನ. ಅಧ್ಯಾಯ-೨. ವಲ್ಲೀ-೨. ಶ್ಲೋಕ-೨೩.]

"ತ್ಯಾಗಭಾವನೆಯಿಲ್ಲದವನೂ, ಅಶಾಂತನೂ, ಸ್ಥಿರ ಮನಸ್ಸಿಲ್ಲದವನೂ, ಕ್ಷುಬ್ಧಮತಿಯೂ ಇವನನ್ನು ಹೊಂದಲಾರನು; ಕೇವಲ ಪ್ರಜ್ಞಾನಸಂಪನ್ನನು ಮಾತ್ರ ಇವನನ್ನು ಹೊಂದಬಲ್ಲನು."

ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ನರಃ ।
ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂಪದಮ್ ॥

[ಕೇನ. ಅಧ್ಯಾಯ-೨. ವಲ್ಲೀ-೩. ಶ್ಲೋಕ-೯]

"ಯಾವನಿಗೆ ವಿಜ್ಞಾನವೇ ಸಾರಥಿಯಾಗಿರುತ್ತದೋ, ಮನಸ್ಸೇ ಕಡಿವಾಣವಾಗಿರುತ್ತದೋ ಅವನೇ ಯಾತ್ರೆಯ ಗುರಿಯಾದ ಸರ್ವವ್ಯಾಪಕ ಪರಮಾತ್ಮನ ಸಾಕ್ಷಾತ್ಕಾರವನ್ನು ಹೊಂದುತ್ತಾನೆ."

ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ ಸಮ್ಯಜ್ಜ್ಞಾನೇನ-
ಬ್ರಹ್ಮಚರ್ಯೇಣ ನಿತ್ಯಂ ।
ಅಂತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋ ಯಂ-
ಪಶ್ಯಂತಿ ಯತಯಃ ಕ್ಷೀಣದೋಷಾಃ ॥

[ಮುಂಡಕ-೩. ಖಂಡ-೧. ಶ್ಲೋಕ-೫.]

"ಯಾವನನ್ನು ನಿಷ್ಠಾಪರರಾದ ಸನ್ಯಾಸಿಗಳು ಸಾಕ್ಷಾತ್ಕರಿಸಿ ಕೊಳ್ಳುತ್ತಾರೋ ಆ ಅಂತರ್ಯಾಮಿಯಾದ ಪರಿಶುದ್ಧ ಜ್ಯೋತಿಃಸ್ವರೂಪ ಪರಮಾತ್ಮನು, ಸತ್ಯ, ತಪಸ್ಸು, ಸುದ್ಧವಾದ ಜ್ಞಾನ, ಬ್ರಹ್ಮಚರ್ಯ—ಇವುಗಳಿಂದಮಾತ್ರ ಸದಾಲಭ್ಯನಾಗಿರುವನು."

ಇ ರೀತಿ, ಸತ್ಯಶಾಸ್ತ್ರಗಳ ದೃಷ್ಟಿಯಿಂದಲೂ ಉನ್ನತವೂ ಪವಿತ್ರವೂ ಆದ ಜೀವನವೇ — ಸದ್ಗುಣಗಣವಿಭೂಷಿತವಾದ ಸದಾಚಾರವೇ—ಪರಮಾತ್ಮಸಾಕ್ಷಾ ತ್ಕಾರದ ಸಾಧನವೆಂಬುದು ವ್ಯಕ್ತವಾಗುತ್ತದೆ. ಶಾಸ್ತ್ರಪ್ರಮಾಣಗಳೂಸಹ, ನಮ್ಮ ಪಕ್ಷವನ್ನೇ ಪ್ರತಿಪಾದಿಸುತ್ತವೆ. ಜೀವನವು ಪವಿತ್ರವಾಗಬೇಕಾದರೆ, ವೇದೋಕ್ತವಾದ ಮತ್ತು ಮಹರ್ಷಿ ಪತಂಜಲಿ ಪ್ರಣೀತವಾದ ಯೋಗಮಾರ್ಗ ಒಂದೇ ಸರಿಯಾದ ಹಾದಿ. ಆದುದರಿಂದ, ಪ್ರತಿಯೊಬ್ಬ ಪರಮಾತ್ಮಭಕ್ತನೂ ತನ್ನ ಜೀವನದಲ್ಲಿ ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನ, ಧಾರಣಾ — ಈ ಮೊದಲಾದ ಮೆಟ್ಟಲುಗಳನ್ನು ದಾಟುತ್ತಾ ಹೋಗಬೇಕಾದುದು ನ್ಯಾಯವಾಗಿದೆ. ಕೇವಲ ಸುಲಭವೆಂಬ ಒಂದೇ ಒಂದು ಕಾರಣದಿಂದ, ಅನರ್ಥಕರವಾದ ಮೂರ್ತಿಪೂಜೆಯನ್ನು ಸರಿಯೆಂದು ವಾದಿಸುವುದು ಯುಕ್ತವಲ್ಲ. ನಮ್ಮ ವಿವೇಚನೆಯಲ್ಲಿ, ನಾವು ಮೂರ್ತಿಪೂಜೆಯಿಂದ ಉಂಟಾಗುವ ಕುಂದು ಕೊರತೆಗಳನ್ನೆಲ್ಲಾ ವಿಸ್ತಾರವಾಗಿ ವರ್ಣಿಸಿದ್ದೇವೆ.

ನಾವೆಲ್ಲರೂ ನಿಜವಾದ ಅರ್ಥದಲ್ಲಿ ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನ ಉಪಾಸಕರಾಗುವಂತಹ ಶಕ್ತಿ ನಮ್ಮಲ್ಲುಂಟಾಗಲಿ; ಆ ದಿವ್ಯವಾದ ಜ್ಞಾನದಬೆಳಕು ನಮ್ಮಮೇಲೆ ಬೀಳಲಿ—ಎಂಬುದೇ ನಮ್ಮ ಅಂತರಂಗದ ಕಾಮನೆ. ಈ ಪವಿತ್ರ ಪ್ರೇಮಭಾವನೆಯಿಂದ ಪ್ರೇರಿತರಾಗಿಯೇ ನಾವೀ ಕೃತಿಗೆ ಕೈಹಾಕಿದ್ದೇವೆ. ಕರುಣಾಮಯನಾದ ಜಗದಂತರಾತ್ಮನ ಅಪಾರ ಕರುಣೆಯಿಂದ, ಈ ಕೃತಿ ಹಲವಾರು ಮಂದಿಗಳ ಹೃದಯದಲ್ಲಿಯಾದರೂ ಚೇತನಬ್ರಹ್ಮೋಪಾಸನೆಯ ಹಂಬಲನ್ನು ಹುಟ್ಟಿಸಿದರೆ ನಮ್ಮ ಶ್ರಮ ಸಾರ್ಥಕವಾದಂತೆಯೇ ಸರಿ.

॥ ಓಂ ಶಾಂತಿಶ್ಶಾಂತಿಶ್ಶಾಂತಿಃ ॥



ಸುಮಾ ಮುದ್ರಣಾಲಯ, ಬೆಂ–೯. ದೂರವಾಣಿ : 29659



# ತುಂಬುಜೀವನ ನಮ್ಮದಾಗಲಿ

**ಇಂದ್ರ ಶ್ರೇಷ್ಠಾನಿ ದ್ರವಿಣಾನಿ ಧೇಹಿ**
**ಚಿತ್ತಿಂ ದಕ್ಷಸ್ಯ ಸುಭಗತ್ವಮಸ್ಮೇ ।**
**ಪೋಷಂ ರಯೀಣಾಮರಿಷ್ಟಿಂ ತನೂನಾಂ**
**ಸ್ವಾದ್ಮಾನಂ ವಾಚಃ ಸುದಿನತ್ವಮಹ್ನಾಂ ॥**

(ಋಗ್ವೇದ: ೨–೨೧–೬)

ಸರ್ವೈಶ್ವರ್ಯಸಂಪನ್ನ ಭಗವಂತ! ನಮ್ಮಲ್ಲಿ ಎಲ್ಲರಿಗೂ ಪ್ರಾಮಾಣಿಕತ್ವದಿಂದ ಲಭಿಸುವ ಐಶ್ವರ್ಯವನ್ನು ಕರುಣಿಸು. ದಕ್ಷನಾದವನ ಜಾಗರೂಕತೆ ನಮಗೆ ಲಭಿಸಲಿ. ಸೌಭಾಗ್ಯ ಸರ್ವದಾ ನಮ್ಮದಾಗಿರಲಿ. ಸಂಪತ್ತು ವಾಣಿಗಳಲ್ಲಿ ಮಾಧುರ್ಯತುಂಬಿರಲಿ. ದಿನಗಳೆಲ್ಲವೂ ನಮ್ಮ ಪಾಲಿಗೆ ಶುಭವೇ ಆಗಿರಲಿ. ತುಂಬುಜೀವನ ನಮ್ಮದಾಗಲಿ.